

ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್., ಪದವಿಯ ಸಂಪ್ರಬಂಧ

# "ಕುವೆಂಪು ಕಾದಂಬರಿಗಳಲ್ಲಿ ; ಭಾಷೆ ಮತ್ತು ಸಾಮಾಜಿಕ ಸಂಬಂಧಗಳು"


ಸಂಶೋಧನ ವಿದ್ಯಾರ್ಥಿ :

**ಶಿಲ್ಪ ಹೆಚ್. ಜಿ.**

ಮಾರ್ಗದರ್ಶಕರು :

**ಪ್ರೊ. ಎಂ. ಹೆಚ್. ಕೃಷ್ಣಯ್ಯ**





ಎಂ. ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ,

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.

2008

ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್., ಪದವಿಯ ಸಂಪ್ರಬಂಧ

# "ಕುವೆಂಪು ಕಾದಂಬರಿಗಳಲ್ಲಿ ; ಭಾಷೆ ಮತ್ತು ಸಾಮಾಜಿಕ ಸಂಬಂಧಗಳು"

ಸಂಶೋಧನ ವಿದ್ಯಾರ್ಥಿ :

**ಶಿಲ್ಪ ಹೆಚ್. ಜಿ.**

ಮಾರ್ಗದರ್ಶಕರು :

**ಪ್ರೋ. ಎಂ. ಹೆಚ್. ಕೃಷ್ಣಯ್ಯ**



ಎಂ. ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಬೆಂಗಳೂರು.



2008



ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್., ಪದವಿಯ ಸಂಪ್ರಬಂಧ

# "ಕುವೆಂಪು ಕಾದಂಬರಿಗಳಲ್ಲಿ ; ಭಾಷೆ ಮತ್ತು ಸಾಮಾಜಿಕ ಸಂಬಂಧಗಳು"

ಸಂಶೋಧನ ವಿದ್ಯಾರ್ಥಿ :

**ಶಿಲ್ಪ ಹೆಚ್. ಜಿ.**

ಮಾರ್ಗದರ್ಶಕರು :

**ಪ್ರೊ. ಎಂ. ಹೆಚ್. ಕೃಷ್ಣಯ್ಯ**







ಎಂ. ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಬೆಂಗಳೂರು.



2008

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2007–08 ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಕುವೆಂಪು ಕಾದಂಬರಿಗಳಲ್ಲಿ ಭಾಷೆ ಮತ್ತು ಸಾಮಾಜಿಕ ಸಂಬಂಧಗಳು"** ಎಂಬ ಸಂಪ್ರಬಂಧವನ್ನು ಪ್ರೊ. ಎಂ.ಹೆಚ್.ಕೃಷ್ಣಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 4/11/08
ಸ್ಥಳ : ಬೆಂಗಳೂರು.

ಸಹಿ
ಶಿಲ್ಪ ಎಚ್. ಜಿ.
(ಹೆಚ್.ಜಿ.ಶಿಲ್ಪ)

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2007–08 ನೇ ಸಾಲಿನ ಎಂ.ಫಿಲ್ ಪದವಿಗಾಗಿ **"ಕುವೆಂಪು ಕಾದಂಬರಿಗಳಲ್ಲಿ ಭಾಷೆ ಮತ್ತು ಸಾಮಾಜಿಕ ಸಂಬಂಧಗಳು"** ಎಂಬ ಸಂಪ್ರಬಂಧವನ್ನು ಹೆಚ್.ಜಿ.ಶಿಲ್ಪ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 4/11/08
ಸ್ಥಳ : ಬೆಂಗಳೂರು

ಸಹಿ
ಎಂ. ಎಚ್. ಕೃಷ್ಣಯ್ಯ
(ಪ್ರೊ. ಎಂ.ಹೆಚ್.ಕೃಷ್ಣಯ್ಯ)

# ಕುವೆಂಪು ಕಾದಂಬರಿಗಳಲ್ಲಿ : ಭಾಷೆ ಮತ್ತು ಸಾಮಾಜಿಕ ಸಂಬಂಧಗಳು

## ಪರಿವಿಡಿ

## I. ಅಧ್ಯಯನದ ಸ್ವರೂಪ ಮತ್ತು ಉದ್ದೇಶ :-

ಸಾಹಿತ್ಯದ ಎಲ್ಲ ವಿಭಾಗಗಳಲ್ಲಿಯೂ ಕೈಯಾಡಿಸಿದವರಿಗೆ ಕನ್ನಡದಲ್ಲಿಯೂ ಕೊರತೆಯಿಲ್ಲ ಆದರೆ ಎಲ್ಲ ವಿಭಾಗಗಳಲ್ಲೂ ಪೂರ್ಣ ಯಶಸ್ಸು ಪಡೆದು ಶಾಶ್ವತವಾಗಿ ಉಳಿಯುವಂತಹ ಕೃತಿ ರಚನೆ ಮಾಡಿರುವವರು ಮಾತ್ರ ವಿರಳ. ಆದರೆ ಕುವೆಂಪು ಕಾವ್ಯ, ನಾಟಕ, ಕಾದಂಬರಿ ಎಲ್ಲಾ ವಿಭಾಗಗಳಲ್ಲೂ ತಮ್ಮ ಪ್ರತಿಭೆಯನ್ನು ಮೆರೆದವರು.

ಬಹುಮುಖ ಪ್ರತಿಭೆಯ ಕೆ.ವಿ.ಪುಟ್ಟಪ್ಪನವರ ಕಾವ್ಯನಾಮ ಕುವೆಂಪು. ಕುವೆಂಪು ಬರಿಯ ವ್ಯಕ್ತಿಯಲ್ಲ, ವ್ಯಕ್ತಿರೂಪದ ಮಂತ್ರ ಶಕ್ತಿ , ವಿಶ್ವಚೈತನ್ಯವನ್ನಾಲಂಗಿಸಿದ ಅಪೂರ್ವ ಚೈತನ್ಯ , ಅವರ ಪರಿಚಯ ಎಂದರೆ ಅಂಗೈಯಲ್ಲಿ ಆಕಾಶವನ್ನಿಡುವ ಸಾಹಸವಾಗುತ್ತದೆ. ನಿಸರ್ಗಕ್ಕೆ ಮತ್ತೊಂದು ಹೆಸರೇ ಕುವೆಂಪು.

ಕುವೆಂಪು ಶ್ರೀ ರಾಮಕೃಷ್ಣ ಪರಮಹಂಸರ ಸರ್ವಧರ್ಮ ಸಮನ್ವಯ ತತ್ವವನ್ನು ಒಪ್ಪಿ ಶ್ರೀ ಅರವಿಂದರ ಅತಿ ಮಾನವ ಶಕ್ತಿಯ ಅನಂತತ್ವದ ಒಳಹೊಕ್ಕು ವಿವೇಕಾನಂದರ ವಿಶ್ವ ಮಾನವತೆಯನ್ನು ಮೈಮನಗಳ ತುಂಬ ತುಂಬಿಕೊಂಡು ವಿಶ್ವ ವ್ಯಾಪಕವಾಗಿ ಬೆಳೆದ ಅಪೂರ್ವ ಚೈತನ್ಯ. ಸಕಲ ದಿಕ್ಕನ್ನೂ ಆವರಿಸಿ ಬೆಳಗುತ್ತಿರುವ ಜ್ಯೋತಿಯಂತೆ ಕುವೆಂಪು ಸಾಹಿತ್ಯ ಸರ್ವಸ್ವವನ್ನೂ ಒಳಗೊಂಡು ಎಲ್ಲಾ ಕ್ಷೇತ್ರಗಳನ್ನು ಪ್ರವೇಶಿಸಿ ಪುನೀತಗೊಳಿಸಿದ್ದಾರೆ. ಅವರವರ ಚೈತನ್ಯ ಜಾಗೃತಿಗಾಗಿ ಅವರ ಸಾಹಿತ್ಯ ಕೃತಿಗಳನ್ನು ಅಧ್ಯಯನ ಮಾಡಬೇಕಾದುದು ಅನಿವಾರ್ಯ. ಓದದಿದ್ದರೆ ನಷ್ಟ ಖಂಡಿತ ಕುವೆಂಪು ಅವರಿಗೆ ಅಲ್ಲ , ಓದುಗರಿಗೆ ಎನ್ನುವ ಅರಿವೇ ಗುರುವಾಗಿದೆ. ಕುವೆಂಪು ಜಗತ್ತಿನ ಅಭೂತಪೂರ್ವ ವಿಶಿಷ್ಟ ಕವಿಯೆಂಬುದು ಕನ್ನಡಿಗರ ಭಾರತೀಯರ ಹೆಮ್ಮೆಯ ಸಂಗತಿ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಅಪೂರ್ವವಾದ ಸಿದ್ಧಿಯನ್ನು ಸಾಧಿಸಿದ್ದಾರೆ. ಆಧ್ಯಾತ್ಮಿಕ ಸಿದ್ಧಿ, ಸಾಹಿತ್ಯ ಪ್ರತಿಭೆ, ವೈಜ್ಞಾನಿಕ ಮನೋಧರ್ಮ, ವೈಚಾರಿಕ ಪ್ರಜ್ಞೆ , ನಿಸರ್ಗ ಪ್ರೇಮ, ರಾಷ್ಟ್ರೀಯತೆ, ಪ್ರಾದೇಶಿಕತೆಗಳ ಸುಮಧರ ಸಮನ್ವಯ ಸಮಷ್ಟಿ ಚೈತನ್ಯ , ಜನತಾ ಪ್ರಜ್ಞೆ ಹಾಗೂ ಸಾಮಾಜಿಕ ಬದ್ಧತೆಗಳು ಔಚಿತ್ಯ ಪೂರ್ಣವಾಗಿ, ಸಮರಸವಾಗಿ ಸಂಗಮಗೊಂಡ ದಿವ್ಯೋಜ್ವಲ ಪ್ರಭಾವಳಿ ಅವರದು. ಆದ್ದರಿಂದಲೇ ವರಕವಿ ಬೇಂದ್ರೆಯವರು ಕುವೆಂಪು ಅವರನ್ನು ಯುಗದ ಕವಿ ಎಂದು ಕರೆದದ್ದು. ಕುವೆಂಪು ಸಾಹಿತ್ಯದಲ್ಲಿ ಪಾರಮಾರ್ಥಿಕ ಲೌಕಿಕಗಳೆರಡೂ ಪರಸ್ಪರ ಹೆಣೆಗೆಗೊಂಡಿವೆ. ಹಳೆಯ ನಂಬಿಕೆಗಳು ತೊಲಗಬೇಕು, ಮೂಢ ನಂಬಿಕೆಗಳು ಸಮಾಧಿಯಾಗಬೇಕು ; ವೈಚಾರಿಕತೆ ಮತ್ತು ವೈಜ್ಞಾನಿಕತೆ ಜನಜೀವನದಲ್ಲಿ ತುಂಬಿಕೊಳ್ಳಬೇಕು ಎನ್ನುವುದು ಕುವೆಂಪು ಅವರ ಸಂಕಲ್ಪವಾಗಿದೆ.

ಕುವೆಂಪು ಅವರ ಸಾಹಿತ್ಯವನ್ನು ಅವಲೋಕಿಸಿದರೆ ಅದು ಮನುಕುಲವನ್ನು ಜಾತಿ, ಮತ, ವರ್ಗ, ವರ್ಣಗಳಾಗಿ ಛಿದ್ರಗೊಳಿಸಿ ಶೋಷಣೆಗೆ ಈಡು ಮಾಡಿರುವ ಪುರೋಹಿತಶಾಹಿಯ ಕುತಂತ್ರದ ಖಂಡನೆ ಹಾಗೂ ವಾಸ್ತವ ಅರಿವಿನ ಮೂಲಕ ಆಧ್ಯಾತ್ಮದ ಉನ್ನತಿಯನ್ನು ಸಾಧಿಸುತ್ತಾ ಜೀವಿಗಳಿಗೆ

ಮನುಜಮತ ವಿಶ್ವಪಥ ಸರ್ವೋದಯ ಸಮನ್ವಯಕ್ಕೆ ಒಳಗಾಗುವಂತೆ ಮಾಡುವುದು ಕಂಡುಬರುತ್ತದೆ. ಆದ್ದರಿಂದಲೇ ಕುವೆಂಪು ಅವರು ಮಹಾಕವಿ ಎಂತೋ ಅಂತೆಯೇ ಮಹಾ ಕಾದಂಬರಿಕಾರರೂ ಹೌದು. ಅವರನ್ನು ಮಹಾಕವಿ ಎಂದು ಒಪ್ಪಿಕೊಳ್ಳದ ಕೆಲವು ವಿಮರ್ಶಕರು ಅಡ್ಡದಾರಿ ಹಿಡಿದು ತಮ್ಮನ್ನು ಟೀಕಾಕಾರರಿಂದ ರಕ್ಷಿಸಿಕೊಳ್ಳಲು ಕುವೆಂಪು ಅವರನ್ನು ಮಹಾಕಾದಂಬರಿಕಾರರು ಎಂದು ಕರೆಯಲು ಮುಂದಾದರು. ಅವರು ಕೈಯಾಡಿಸಿರುವ ಸಾಹಿತ್ಯದ ಎಲ್ಲಾ ಪ್ರಕಾರಗಳ ಬರವಣಿಗೆಯು ಸತ್ವಪೂರ್ಣವಾಗಿದೆ.

ಕುವೆಂಪು ಅವರು ಬರೆದದ್ದೆ ಎರಡು ಕಾದಂಬರಿಗಳು ಒಂದು 'ಕಾನೂರು ಹೆಗ್ಗಡಿತಿ' ಮತ್ತೊಂದು 'ಮಲೆಗಳಲ್ಲಿ ಮದುಮಗಳು' ಈ ಎರಡು ಕಾದಂಬರಿ 19ನೇ ಶತಮಾನದ ಕೊನೆಯ ಹಾಗೂ 20ನೇ ಶತಮಾನದ ಆದಿಭಾಗದಲ್ಲಿ ಕಂಡುಬರುವ ಮಲೆನಾಡಿನ ಜೀವನ ಚಿತ್ರಣವನ್ನು ನಾವೀ ಕಾದಂಬರಿಗಳಲ್ಲಿ ಕಾಣಬಹುದು.

ಹೊಸ ನಾಗರಿಕತೆಯ ಪ್ರಭಾವಕ್ಕೆ ಮುಂಚಿನ ಸಮಾಜದ ಬದುಕು ಈ ಕಾದಂಬರಿಗಳಲ್ಲಿ ಅನಾವರಣಗೊಂಡಿದೆ. ರೂಢಿಮೂಲದ ಆಚಾರ ಅನಾಚಾರಗಳನ್ನು ಹಿಂಜಿ ತೋರಿಸುವ ಕುವೆಂಪು, ಆಧುನಿಕ ಸವಲತ್ತುಗಳನ್ನು ಬರಮಾಡಿಕೊಳ್ಳುವಲ್ಲಿನ ಸಂದಿಗ್ಧ ಮನಸ್ಸನ್ನೂ ಅಷ್ಟೆ ಚೆನ್ನಾಗಿ ಎರಕ ಹೊಯ್ದಿದ್ದಾರೆ. ಹಳೆಯದನ್ನು ಬುಡಮೂಲ ಕಿತ್ತು ಹಾಕಲಾಗದ ಹೊಸದನ್ನು ಅನಾಮತ್ತಾಗಿ ಅಪ್ಪಿಕೊಳ್ಳಲಾಗದ ಡೋಲಾಯಮಾನ ಜನಮಾನಸವನ್ನು ಕುವೆಂಪು ಅವರು ಪ್ರಚೂರಪಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಕುವೆಂಪು ಅವರ ಬಾಲ್ಯದ ದಟ್ಟ ಅನುಭವಗಳು ಎರಡು ಕಾದಂಬರಿಗಳಲ್ಲಿ ಕಾಣಸಿಗುತ್ತದೆ.

ಕಾದಂಬರಿಗಳ ಓದು ರಸಸುಖಕ್ಕಷ್ಟೇ ಸೀಮಿತವಾಗಬಾರದು ಓದುಗರ ಮನರಂಜನೆ ಕಾದಂಬರಿಕಾರರ ಉದ್ದೇಶವಲ್ಲ. ಓದಿನ ಮೂಲಕ ದಕ್ಕಿಸಿಕೊಳ್ಳಬೇಕಾದ್ದು ಒಂದು ಜ್ವಲಂತ ಸಾಂಸ್ಕೃತಿಕ ಬದುಕನ್ನ, ಅದು ಬಿಟ್ಟುಕೊಡುವ ಸಾಮಾಜಿಕ ಗತಿಬಿಂಬವನ್ನು ಅದರಲ್ಲಿ ಎರಕಗೊಂಡಿದೆ.

ಕಾನೂರು ಹೆಗ್ಗಡಿತಿಯಲ್ಲಿ ಸುಧಾರಣೆಯ ಬೆಳಕು ಪರಿವರ್ತನೆಯ ದಾರಿ ಹೊರಗಿನಿಂದ ವಿದ್ಯಾಭ್ಯಾಸ ಮಾಡಿಬಂದ ಯುವಕರ ಮೂಲಕ ಮಲೆನಾಡನ್ನು ಪ್ರವೇಶಿಸಿದರೆ, ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಪರಿವರ್ತನೆಯ ಬೆಳಕು ಅಂತಸ್ರೋತವಾಗಿ ಹರಿದಿದೆ. ಎಲ್ಲಾ ಪಾತ್ರಗಳೂ ಧ್ಯೇಯಕ್ಕಾಗಿ ದುಡಿದಿವೆ.

ಕಾನೂರು ಹೆಗ್ಗಡಿತಿಯಲ್ಲಿ ಹೂವಯ್ಯ ಎಂಬ ಕೇಂದ್ರಪ್ರಜ್ಞೆ ಇದೆ. ಅದು ಓದುಗರನ್ನು ಸೆಳೆಯುತ್ತದೆ. ನಿಯಂತ್ರಿಸುತ್ತದೆ. ಆದರೆ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಅಂತಹ ಯಾವ ಕೇಂದ್ರ ಪ್ರಜ್ಞೆಯೂ ಇಲ್ಲ. ಕನ್ನಡದಲ್ಲಿ ಇದು ಮೊತ್ತ ಮೊದಲ ಪ್ರಯೋಗವನ್ನು ನಾವು ಕುವೆಂಪುರವರ ಈ ಕಾದಂಬರಿಯಲ್ಲಿ ಕಾಣಬಹುದು. ಇನ್ನೂ ಮೊದಲಾದ ವಿಷಯಗಳನ್ನು ಕಾದಂಬರಿಯ ಸ್ವರೂಪದಲ್ಲಿ ಚರ್ಚಿಸಲಾಗಿದೆ.

ಹಾಗೆಯೇ ಸಮಾಜ ಜೀವನದ ಸೂಕ್ಷ್ಮನೋಟಗಳೂ ಇಲ್ಲಿವೆ. ಮಲೆನಾಡಿನ ಮಣ್ಣಿನಲ್ಲಿ ಬೇರುಬಿಟ್ಟು ವೈವಿಧ್ಯಮಯವಾದ ಬದುಕನ್ನು ಪ್ರಾದೇಶಿಕತೆಯ ಸೊಗಡಿನಿಂದ ಮೈದಳೆದು ಮೂಡಿ ಬಂದಿರುವ ಕಾದಂಬರಿಗಳು ಮಲೆನಾಡಿನ ಚರಾಚರಗಳ ಜಡಚೇತನಗಳ ಸಂಗಮವಿದೆ. ಮಲೆನಾಡಿನ ಪರಿಸರ ಚಿತ್ರಣದೊಂದಿಗೆ ಜನ ಜೀವನದ ನೈಜಚಿತ್ರಣ ಮತ್ತು ಭಾಷಾ ವೈವಿಧ್ಯ ಈ ಕಾದಂಬರಿಗಳ ಗುಣ ವಿಶೇಷವಾಗಿದೆ. ಪರಿಸರದ ಭಾಷಾಪ್ರಜ್ಞೆ ಆಡುನುಡಿಯ ಸ್ವರೂಪ ಮಣ್ಣಿನ ವಾಸನೆಯನ್ನು ಗರ್ಭೀಕರಿಸಿಕೊಂಡಿರುವ ಗಾದೆ ನುಡಿಗಟ್ಟು , ಪದಗಳ ಧ್ವನ್ಯಾತ್ಮಕ ಸ್ವರೂಪ, ಪದಗಳ ಸಾಂಸ್ಕೃತಿಕ ಧ್ವನಿ ಇವುಗಳನ್ನು ನೋಡುವ ದೃಷ್ಟಿಯಿರಬೇಕು. ಏಕೆಂದರೆ ಕಾದಂಬರಿಗೆ ನೀರು ಆಹಾರವನ್ನು ಒದಗಿಸುವ ತಾಯಿಬೇರು ಈ ಭಾಷೆಯಾಗಿರುತ್ತದೆ. ಸಾಹಿತ್ಯ ಜೀವನದ ಪ್ರತಿಸೃಷ್ಟಿಯಾಗಿರುವುದರಿಂದ ಕಾದಂಬರಿಕಾರರಿಗೆ ಕೃತಿಯ ವಸ್ತು , ಕಥೆ, ಪಾತ್ರಚಿತ್ರಣ, ಜೀವನದರ್ಶನದಷ್ಟೇ ಭಾಷೆಯೂ ಮುಖ್ಯವಾಗುತ್ತದೆ. ಭಾಷೆಯನ್ನು ದುಡಿಸಿಕೊಂಡಷ್ಟು ಕೃತಿಯ ಉದ್ದೇಶ ಪರಿಣಾಮ ಪೂರ್ವಕವಾಗಿರುತ್ತದೆ.

ಕುವೆಂಪು ಭಾಷೆ ಸಂಸ್ಕೃತ ಭೂಯಿಷ್ಠವಾಗಿದೆ ಎಂಬ ನಿರಾಳವಾದ ಆಕ್ಷೇಪಣೆಯೊಂದು ಪ್ರಚಲಿತವಾಗಿರುವುದರ ಹಿಂದೆ, ಕುವೆಂಪು ಅವರ ಕೃತಿಗಳ ವಿವಿಧ ಸ್ತರಗಳಲ್ಲಿ ಆವಿಷ್ಕಾರಗೊಂಡಿರುವ ಭಾಷೆಯ ಸ್ವರೂಪ ಮತ್ತು ಲಯಗಳನ್ನು ಕುರಿತು ಆಳವಾದ ಪರಿಶೀಲನೆ ಹಾಗೂ ತಿಳುವಳಿಕೆಯ ಅಭಾವವಿದೆ ಮತ್ತು ಕುವೆಂಪು ಭಾಷೆ ಸಂಸ್ಕೃತದ ತೇಜಸ್ಸಿನಿಂದ ಯಾಕೆ ಹಾಗೆ ಪೌರುಷಯುಕ್ತವಾಗಿದೆ ಎನ್ನುವುದರ ಹಿಂದಿರುವ ಸಾಂಸ್ಕೃತಿಕ ಕಾರಣಗಳನ್ನು ಸರಿಯಾಗಿ ಗುರುತಿಸದೇ ಇರುವುದರಿಂದ ವಿಲಕ್ಷಣವಾದ ಪ್ರತಿಕ್ರಿಯೆಗಳು ಅಭಿವ್ಯಕ್ತವಾಗಿದೆ. ಅವರ ಎರಡು ಕಾದಂಬರಿಗಳಲ್ಲಿ ನಿರೂಪಕನ ಭಾಷೆ ಮಾರ್ಗದ ಸ್ಪರ್ಶದಿಂದ ಕೂಡಿದ್ದರೆ ಅದೇ ಕಾದಂಬರಿಗಳಲ್ಲಿ ವಿವಿಧ ಸಾಮಾಜಿಕ ಸ್ತರಗಳಿಗೆ ಸೇರಿದ ಬಹುಸಂಖ್ಯೆಯ ಪಾತ್ರಗಳು ತಮ್ಮ ಸ್ವಭಾವಾನುಸಾರಿಯಾಗಿ ಮಾತನಾಡುವ ಭಾಷೆಯ ಪ್ರಾದೇಶಿಕ ಚಹರೆಗಳ ದೇಸಿಯನ್ನು ಗಮನಿಸಿದರೆ ಕುವೆಂಪು ಅವರ ಭಾಷೆಯ ವೈವಿಧ್ಯ ಮತ್ತು ವಿಸ್ತಾರಗಳು ಯಾರನ್ನು ಬೇಕಾದರೂ ಚಕಿತಗೊಳಿಸುತ್ತವೆ. ಕುವೆಂಪು ಅವರ ಶೈಲಿಯೊಳಗೆ ಕಂಡುಬರುವ ಭಾಷಾ ಪ್ರಯೋಗ ಕನ್ನಡ ಸಾಹಿತ್ಯ ಪರಂಪರೆಗೆ ಅಪರಿಚಿತವಾದುದೇನಲ್ಲ ; ಮತ್ತು ಅದು ಈ ಪರಂಪರೆಯ ಆಳವಾದ ಅರಿವಿನಿಂದ ನಿಷ್ಪನ್ನವಾದದ್ದು ಮೊದಲಾದ ವಿಷಯಗಳನ್ನು ಭಾಷೆ ಮತ್ತು ಶೈಲಿ, ಸಾಮಾಜಿಕ ಸಂಬಂಧಗಳು ಮತ್ತು ಭಾಷೆಯಲ್ಲಿ ಚರ್ಚಿಸಲಾಗಿದೆ.

ಕುವೆಂಪು ಅವರ ಕಾನೂರು ಹೆಗ್ಗಡಿತಿ, ಮಲೆಗಳಲ್ಲಿ ಮದುಮಗಳು, ಲೋಕದ ಹೆಗ್ಗಳಿಕೆಯ ಕೃತಿಗಳು. ಭಾರತೀಯ ಸಮಾಜದಲ್ಲಿ ಮಡುಗಟ್ಟಿ ನಿಂತಿರುವ ಅಜ್ಞಾನ ಮೂಢನಂಬಿಕೆಗಳಿಂದ ಮುಚ್ಚಿ ಹೋಗಿರುವ ಶೋಷಣೆ ದಬ್ಬಾಳಿಕೆಗಳಿಂದ ದಹಿಸಿ ಹೋಗಿರುವ ಹೃದಯಗಳಿಗೆ ಅರಿವಿನ ಹಣತೆ ಹಚ್ಚುವ ಸಾಹಸಯಾತ್ರೆಗಳಾಗಿವೆ.

ಭಾರತದಂಥ ಹಿಂದುಳಿದ ಸಮಾಜಗಳಲ್ಲಿ ಅದೂ ಪ್ರತಿಷ್ಠಿತ ವರ್ಗದ ಸಾಹಿತ್ಯ ಸಾಹಿತಿಗಳು ಬಹುಸಂಖ್ಯಾತ ವರ್ಗಗಳ ಜೀವನವನ್ನು ಕಡೆಗಣಿಸಿದಂಥ ಸಂದರ್ಭಗಳಲ್ಲಿ ಸಮಗ್ರದೃಷ್ಟಿಯ ಲೇಖಕರಾದ ಕುವೆಂಪು ಅವರ ಸಾಹಿತ್ಯ ಸೃಷ್ಟಿ ಬಹಳ ಮುಖ್ಯವಾಗುತ್ತದೆ. ಕುವೆಂಪು ಕಾದಂಬರಿಗಳ

ಸಮಾಜದ ಚಿತ್ರಣವನ್ನು ಬಿಡಿಸುವ ಪ್ರಯತ್ನವಿದೆ. ಪಾಶ್ಚಿಮಾತ್ಯ ಪ್ರಭಾವ ಮಲೆನಾಡಿನ ಸಮಾಜ, ಅದು ಒಳಗಾದ ಸ್ಥಿತ್ಯಂತರಗಳು, ಮಹಿಳೆಯರು ಮತ್ತು ದಲಿತರ ಬವಣೆಗಳು ಮತ್ತು ಆಧುನಿಕತೆ ಹೇರಿದ ಒತ್ತಡಗಳು ಮುಂತಾದವನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಸಮಾಜದಲ್ಲಿ ಮನೆ ಮಾಡಿಕೊಂಡಿರುವ ಜಾತಿಬೇಧ, ವರ್ಗ ವೈಷಮ್ಯ , ಬಡತನ, ಸುಲಿಗೆ, ಶೋಷಣೆ, ಮೂಢ್ಯ, ಅನಾಚಾರಗಳನ್ನು ಕುವೆಂಪು ಜ್ವಲಂತವಾಗಿ ಅನಾವರಣಗೊಳಿಸುತ್ತಾರೆ ಮಾತ್ರವಲ್ಲದೆ ಅವುಗಳಿಂದ ಪಾರಾಗಿ ನಾವು ಸರ್ವೋದಯದತ್ತ ಮುನ್ನಡೆಯಬೇಕೆಂಬ ತೀವ್ರ ಕಳಕಳಿಯನ್ನು ವ್ಯಕ್ತಪಡಿಸುತ್ತಾರೆ. ಸಾಮಾನ್ಯ ಜನತೆಯ ಮೌಢ್ಯವನ್ನು ಪ್ರೇರಿಸಿ ಇಲ್ಲವೆ ಪೋಷಿಸಿ, ದೇವರು ಧರ್ಮಗಳ ಹೆಸರಿನಲ್ಲಿ ಅವರನ್ನು ಶೋಷಿಸುವ ಪುರೋಹಿತಶಾಹಿಯ ಬಗೆಗೆ ಕುವೆಂಪು ಅವರಿಗೆ ಸಾತ್ವಿಕ ಕೋಪವಿದೆ. ಅದು ಕೇವಲ ಒಬ್ಬ ವ್ಯಕ್ತಿ ಅಥವಾ ವರ್ಗವನ್ನು ಕುರಿತದ್ದಲ್ಲ ; ಒಂದು ದುಷ್ಟ ವ್ಯವಸ್ಥೆಯ ವಿರುದ್ಧ ತಳೆದ ನಿಲುವಾಗಿದೆ. ಮೊದಲಾದ ವಿಷಯಗಳ ಬಗ್ಗೆ ಕುವೆಂಪು ಕಾದಂಬರಿಗಳ ಸಮಾಜದಲ್ಲಿ ಚರ್ಚಿಸಲಾಗಿದೆ.

ಕುವೆಂಪು ಅವರ ಕೊಡುಗೆ ಸಾಹಿತ್ಯದ ದೃಷ್ಟಿಯಿಂದ ಮಾತ್ರವಲ್ಲ, ಜನಜೀವನದ ದೃಷ್ಟಿಯಿಂದಲೂ ಅತ್ಯಂತ ಮಹತ್ವಪೂರ್ಣವಾಗಿದೆ. ಸಾಹಿತ್ಯಕ್ಕಿಂತ ಜೀವನ ದೊಡ್ಡದು ಮತ್ತು ಮುಖ್ಯವಾದುದು ಎಂಬುದು ಮೂಲಭೂತವಾದ ನಿಲುವು. ಕಾದಂಬರಿಗಳಲ್ಲಿ ವ್ಯಕ್ತವಾಗುವ ಜೀವನ ಪ್ರಜ್ಞೆ ಹಾಗೂ ಸಾಮಾಜಿಕ ಪ್ರಜ್ಞೆ ದಟ್ಟವಾದುದು ; ಕಲೆಗಾಗಿ ಕಲೆ ಎಂಬ ಸಂಕುಚಿತ ನೆಲೆಯನ್ನು ಮೀರಿ ಜೀವನಕ್ಕಾಗಿ ಕಲೆ ಎಂಬ ಉನ್ನತ ಭೂಮಿಕೆಯಲ್ಲಿ ಪರ್ಯವಸಾನಗೊಂಡದ್ದು. ಅವರೇ ಹೇಳುವಂತೆ ''ನನ್ನ ಸಾಹಿತ್ಯವೆಲ್ಲಾ ಸಾಮಾಜಿಕ ಅಸ್ತ್ರವಾಗಿದೆ'' ಇಂಥ ಮನೋಧರ್ಮದಿಂದ ಸೃಷ್ಟಿಯಾಗುವ ಸಾಹಿತ್ಯ ಸಮಷ್ಟಿ ಸ್ವರೂಪದ್ದಾಗುತ್ತದೆಯೇ ಹೊರತು ಕೇವಲ ವೈಯಕ್ತಿಕ ಅಥವಾ ಖಾಸಗಿ ಆಗುವುದಿಲ್ಲ.

ಸಾಹಿತ್ಯ ಕೃತಿಗಳಲ್ಲಿನ ಭಾಷಾ ಅಧ್ಯಯನದ ಅವಶ್ಯಕತೆ ಇದೆ ಮತ್ತು ಕಾದಂಬರಿಗಳ ಭಾಷಿಕ ಅಧ್ಯಯನ ವೈಶಿಷ್ಟ್ಯಪೂರ್ಣವೆನಿಸಿದೆ. ಆದ್ದರಿಂದ ಈ ಮೇಲಿನ ಸ್ವರೂಪದ ಹಿನ್ನೆಲೆಯಲ್ಲಿ ಕುವೆಂಪು ಕಾದಂಬರಿಗಳಲ್ಲಿ ಭಾಷೆ ಮತ್ತು ಸಮಾಜವನ್ನು ಅಧ್ಯಯನ ಮಾಡುವುದು ಮತ್ತು ಕುವೆಂಪು ಕಾದಂಬರಿಗಳನ್ನು ಪ್ರಾದೇಶಿಕ ಕಾದಂಬರಿಗಳಾಗಿ ವಿಭಾಗ ಮಾಡಬಹುದೇ ಎಂದು ಚಿಂತಿಸುವುದು ಇಲ್ಲಿನ ನನ್ನ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

**********

## II. ಕುವೆಂಪು ಸಂಕ್ಷಿಪ್ತ ಪರಿಚಯ :–

ಭಾರತೀಯ ಸಾಹಿತ್ಯ ಸಂಸ್ಕೃತಿ ಪರಂಪರೆಗೆ ಕರ್ನಾಟಕದ ಕೊಡುಗೆ ವಿಶಿಷ್ಟವಾಗಿದೆ. ಮಹಾಕವಿಗಳನ್ನು ಪಡೆದಿರುವ ಮಹಾಭಾಗ್ಯ ನಮ್ಮದು. 20ನೇ ಶತಮಾನದ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಕುವೆಂಪು ಅವರ ಸಾಹಿತ್ಯಕ ಬೆಳವಣಿಗೆ ಸಾಧನೆ. ಸಿದ್ಧಿಗಳಿಂದ ಅವರು ಇತರ ಕವಿಗಳ ಮೇಲೆ ಬೀರಿದ ಪ್ರಭಾವದಿಂದ ಕಂಗೊಳಿಸುತ್ತಿದೆ. ಕಾವ್ಯ , ನಾಟಕ, ಸಣ್ಣಕಥೆ, ಕಾದಂಬರಿ, ವಚನ, ಕವನ , ಮಹಾಕಾವ್ಯ , ಸಾಹಿತ್ಯ ವಿಮರ್ಶೆ ಈ ಒಂದೊಂದು ಪ್ರಕಾರದಲ್ಲೂ ಗಣನೀಯವಾದ ಕೊಡುಗೆಯನ್ನು ಕುವೆಂಪು ನೀಡಿದ್ದಾರೆ. ಕನ್ನಡಕ್ಕೆ ರಾಷ್ಟ್ರಮಟ್ಟದ ಖ್ಯಾತಿಯನ್ನು ತಂದುಕೊಟ್ಟ ಮೊದಲಿಗರಲ್ಲಿ ಅವರೂ ಒಬ್ಬರು. ಇಂಗ್ಲೀಷ್ ಮುಂತಾದ ಯೂರೋಪಿಯನ್ ಭಾಷೆಗಳಿಗೆ ಅವರ ಕೃತಿಗಳು ಅನುವಾದಗೊಂಡಾಗ ಕನ್ನಡಕ್ಕೆ ಅಂತರರಾಷ್ಟ್ರೀಯ ಮಟ್ಟದ ಖ್ಯಾತಿಯೂ ದೊರೆಯಿತು.

ಕುವೆಂಪು ಅವರ ಕೊಡುಗೆ ಸಾಹಿತ್ಯದ ದೃಷ್ಟಿಯಿಂದ ಮಾತ್ರವಲ್ಲ, ಜನಜೀವನದ ದೃಷ್ಟಿಯಿಂದಲೂ ಅತ್ಯಂತ ಮಹತ್ವಪೂರ್ಣವಾದುದು. ಸಾಹಿತ್ಯಕ್ಕಿಂತ ಜೀವನ ದೊಡ್ಡದು ಎಂಬುದು ಮೂಲಭೂತದ ನಿಲುವು. ಅವರ ಕೃತಿಗಳಲ್ಲಿ ವ್ಯಕ್ತವಾಗುವ ಜೀವನ ಮತ್ತು ಸಾಮಾಜಿಕ ಪ್ರಜ್ಞೆ ದಟ್ಟವಾದುದು. ಕುವೆಂಪು ಅವರೇ ಹೇಳಿರುವಂತೆ "ನಾನೀಗ ಕಾವ್ಯದಲ್ಲಿ ಬದುಕುತಿದ್ದೇನೆ," ಬರೆಯುತ್ತಿಲ್ಲ "ಋಷಿಯಲ್ಲದವನು ಕವಿಯಾಗಲಾರ"[1] ಎಂಬ ಮಾತಿಗೆ ಕುವೆಂಪು ಸಾರ್ಥಕವಾಗಿದ್ದಾರೆ.

ಕುವೆಂಪು ಅವರ ಪೂರ್ಣ ಹೆಸರು ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಬಳಿಯಿರುವ ಕುಪ್ಪಳ್ಳಿ ಅವರ ತಂದೆಯ ಊರು ಆದರೆ ಅವರು ಜನಿಸಿದ್ದು ಅವರ ತಾಯಿಯ ಮನೆಯಾದ ಹೀರೇ ಕೊಡಿಗೆಯಲ್ಲಿ 1904ರ ಡಿಸೆಂಬರ್ 29ನೇ ದಿನ. ಆದರೆ ಕುವೆಂಪು ಬೆಳೆದದ್ದು ಕುಪ್ಪಳ್ಳಿಯಲ್ಲಿ.

ಸುತ್ತದಟ್ಟವಾದ ಕಾಡು, ಪರ್ವತಗಳ ಸಾಲು, ಪ್ರಾಣಿ, ಪಕ್ಷಿಗಳು, ಮಳೆ ದಟ್ಟವಾದ ಕಪ್ಪು ಮೋಡಗಳ ಸಾಲು, ಗುಡುಗು, ಮಿಂಚುಗಳ ಆರ್ಭಟ, ಮಳೆ ಇಲ್ಲದಾಗ ಬಾನು ಶುಭ್ರ ನೀಲಿ, ಸುಂದರವಾದ ಸೂರ್ಯೋದಯ , ಚಂದ್ರೋದಯ, ಸೂರ್ಯಾಸ್ತಗಳು ಇವೆಲ್ಲಕ್ಕೆ ಹಿನ್ನೆಲೆಯಾಗಿ ತುಂಗೆಯ ಮಂಜುಳಗಾನ. ಹಿರಿಯರ ಜೊತೆ ಕುವೆಂಪು ಅವರು ಹುಲಿಹಂದಿ ಮೀನು ಶಿಕಾರಿ ಇವೆಲ್ಲವುಗಳಿಂದ ಪಡೆದ ಅನುಭವ–ಅನುಭಾವಗಳು ಅಮೂಲ್ಯವಾಗಿ ಅವರ ದೇಹದ ರಕ್ತದ ಭಾಗವಾಗಿ ಹರಿಯತೊಡಗಿದವು.

ಕುವೆಂಪುರವರಿಗೆ ಚಿಕ್ಕಂದಿನಿಂದಲೇ ಸಾಹಿತ್ಯ ಸಂಸ್ಕಾರವೂ ದೊರಕಿತು. ಮನೆಯಲ್ಲಿ ತಂದೆ, ಚಿಕ್ಕಪ್ಪ ಇಬ್ಬರೂ ಸಾಹಿತ್ಯಾಸಕ್ತರು. ಜೈಮಿನಿ ಭಾರತ, ತೊರವೆ ರಾಮಾಯಣಗಳ ವಾಚನ ಮನೆಯಲ್ಲಿ ನಡೆಯುತ್ತಿತ್ತು, ಅದನ್ನು ಆಸಕ್ತಿಯಿಂದ ಕೇಳುತ್ತಿದ್ದರು ಮತ್ತು ಮನೆಯೇ ಶಾಲೆಯೂ ಆಗಿತ್ತು. ಅನೇಕ

---

೧. ಕುವೆಂಪು ಸಾಹಿತ್ಯ : ಕೆಲವು ಮುಖಗಳು– ಸಿ.ಪಿ.ಕೆ., ಪುಟ ಸಂಖ್ಯೆ ೨

'ಐಗಳು' ಬಂದುಹೋಗಿ ಮಾಡಿ ವಿದ್ಯಾಭ್ಯಾಸ ಕುಂಟುತ್ತಾ ಸಾಗಿತು. ನಂತರ ಬಂದ ರೋಮನ್ ಕ್ಯಾಥೋಲಿಕ್ ಜಾತಿಗೆ ಸೇರಿದ ಮಂಗಳೂರು ಆನಂದರಾಯರೆಂಬ ನವೀನ ರೀತಿಯ ಐಗಳು ಕುವೆಂಪುರವರಿಗೆ ಇಂಗ್ಲಿಷ್ ಭಾಷೆ ಸಾಹಿತ್ಯಗಳ ಸ್ಪರ್ಶವನ್ನು ನೀಡಿದವರು. ಮುಂದೆ ಕುವೆಂಪುರವರಿಗೆ ಎಂಟು ವರ್ಷ ವಯಸ್ಸಾದಾಗ ತೀರ್ಥಹಳ್ಳಿ ಶಾಲೆಗೆ ಸೇರಿಸಿದರು. ನಂತರ ಒಂದನೇ ಮಹಾಯುದ್ಧದಿಂದ ನಷ್ಟ ಉಂಟಾಗಿ ಅವರ ತಂದೆ ಧೈರ್ಯಗುಂದಿ ಊರುಬಿಟ್ಟು ತೀರ್ಥಹಳ್ಳಿಗೆ ವಲಸೆ ಬಂದರು. ಸ್ವಲ್ಪ ಸಮಯದಲ್ಲೇ ತಂದೆ ಹೆಂಡತಿ, ಮಕ್ಕಳನ್ನು ಬಿಟ್ಟು ತೀರಿಕೊಂಡರು. ತಂದೆಯ ವಿಯೋಗದಿಂದ ಪುಟ್ಟಪ್ಪನವರ ವಿದ್ಯಾಭ್ಯಾಸ ಕುಂಠಿತವಾಗದೇ ನಂತರ ಮೈಸೂರು ಹಾರ್ಡ್‌ವಿಕ್ ಹೈಸ್ಕೂಲಿನಲ್ಲಿ ಮುಂದುವರೆಯಿತು. ಷೆಲ್ಲಿ, ವರ್ಡ್ಸ್‌ವರ್ತ್, ಕೀಟ್ಸ್ ಮೊದಲಾದವರ ಆಂಗ್ಲ ಕವಿಗಳ ಕವನಗಳನ್ನು ಸ್ವತಂತ್ರವಾಗಿ ಓದುವ ಶಕ್ತಿ ಅವರಿಗೆ ಬಂದಿತ್ತು ಟಾಲ್‌ಸ್ಟಾಯ್, ಹಾರ್ಡಿ ಮೊದಲಾದವರ ಕಾದಂಬರಿಗಳು ಪೌರ್ವಾತ್ಯ , ಪಾಶ್ಚಾತ್ಯ ತತ್ವಜ್ಞರ ಚಿಂತನಶೀಲ ಬರವಣಿಗೆಗಳು ಅವರ ಭಾವ ಬುದ್ಧಿಗಳಿಗೆ ಪುಷ್ಟಿ ನೀಡಿದವು. ಶ್ರೀ ಸ್ವಾಮಿ ಸಿದ್ಧೇಶ್ವರಾನಂದರ ಕೃಪೆಯಿಂದ ಶ್ರೀ ರಾಮಕೃಷ್ಣಾಶ್ರಮದಲ್ಲಿ ವಾಸವಾಗಿದ್ದರು. ಅಲ್ಲಿಂದ ಕುವೆಂಪುರವರ ಮೇಲೆ ವಿವೇಕಾನಂದರು ಶ್ರೀ ರಾಮಕೃಷ್ಣ ಪರಮಹಂಸರು ಅವರ ಆದರ್ಶ ವ್ಯಕ್ತಿಗಳಾದರು.

ಇಂಗ್ಲೀಷ್ ಕವಿಗಳ, ಕವನಗಳ ಮೋಹ ಇಂಗ್ಲಿಷ್ ಭಾಷೆ ಛಂದಸ್ಸುಗಳ ಮೇಲಣ ಪ್ರಭುತ್ವ ಕುವೆಂಪುರವರ ಮೇಲೆ ಹೊಸ ಆಸೆ ಆಕಾಂಕ್ಷೆಗಳನ್ನು ಅರಳಿಸಿದವು. ಹದಿನೆಂಟರ ಹರೆಯದ ಪುಟ್ಟಪ್ಪ 1922ರಲ್ಲಿ ತಮ್ಮ ಇಂಗ್ಲಿಷ್ ಕವನಗಳ ಪುಟ್ಟ ಸಂಕಲನವನ್ನು 'ಬಿಗಿನರ್ಸ್ ಮ್ಯೂಸ್' ಹೆಸರಿನಲ್ಲಿ ಪ್ರಕಟಿಸಿದರು. ಆಗಿನ್ನೂ ಅವರು ಹೈಸ್ಕೂಲು ವಿದ್ಯಾರ್ಥಿ. ಮೈಸೂರಿಗೆ ಬಂದಿದ್ದ ಐರಿಷ್ ಕವಿ ಜೇಮ್ಸ್ ಕಸಿನ್ಸ್ ಅವರಿಗೆ ಕುವೆಂಪುರವರು ತಮ್ಮ ಕವನಗಳನ್ನು ತೋರಿಸಿದರು. ಕವನಗಳನ್ನು ಓದಿದ ಜೇಮ್ಸ್ ಕಸಿನ್ಸ್ ಮೆಚ್ಚಿ ಪ್ರೋತ್ಸಾಹಿಸುವುದರ ಬದಲು ''ರವೀಂದ್ರರು ತಮ್ಮ ತಾಯಿನುಡಿಯಾದ ಬಂಗಾಳಿಯಲ್ಲಿ ಬರೆದಂತೆ ನೀನು ನಿನ್ನ ಮಾತೃಭಾಷೆಯಾದ ಕನ್ನಡದಲ್ಲಿ ಬರೆ ಉತ್ತಮ ಕವಿಯಾಗುತ್ತೀಯ'' ಎಂದರು. ಅದನ್ನು ಒಪ್ಪದ ಕುವೆಂಪುರವರು ತಮ್ಮದೇ 'ಏಪ್ರಿಲ್' ಎಂಬ ಇಂಗ್ಲಿಷ್ ಕವನವನ್ನು 'ಚೈತ್ರ–ವೈಶಾಖ' ಎಂದು ಅನುವಾದಿಸಿ ಪ್ರಕಟಿಸಿದರು. ನಂತರ ಕುವೆಂಪುರವರು ಸಾಹಿತ್ಯವಾಹಿನಿ ಇಂಗ್ಲಿಷ್‌ನಿಂದ ಕನ್ನಡದ ಕಡೆಗೆ ಹರಿಯಿತು.

ಕುವೆಂಪುರವರ ವಿದ್ಯಾಭ್ಯಾಸ ಮುಂದುವರಿಯಿತು. ಎಂಟ್ರೆನ್ಸ್ ಪರೀಕ್ಷೆಯಲ್ಲಿ ರಸಾಯನಶಾಸ್ತ್ರ ಮತ್ತು ಜೀವವಿಜ್ಞಾನಗಳನ್ನೂ ಬಿ.ಎ.ತರಗತಿಯಲ್ಲಿ ಮನಶಾಸ್ತ್ರ ಮತ್ತು ತತ್ವಶಾಸ್ತ್ರಗಳನ್ನೂ ಅಧ್ಯಯನ ವಿಷಯಗಳಾಗಿ ಆರಿಸಿಕೊಂಡರು. ಈ ಮಧ್ಯೆ ತೀವ್ರವಾದ ಅನಾರೋಗ್ಯದಿಂದ ಅಲೆದಾಟ ತಪ್ಪಿ ಸ್ಥಿರವಾದ ಮನೆ ದೊರೆಯಿತು. ಅದಕ್ಕೆ ಕಾರಣರಾದವರೇ ಅವರ ಗುರುಗಳಾದ ನಾ.ಕಸ್ತೂರಿಯವರು ಮತ್ತು ಆಶ್ರಮದ ಶ್ರೀ ಸ್ವಾಮಿ ಸಿದ್ಧೇಶ್ವರಾನಂದರು. ಓದು ಮುಗಿದು ಅಧ್ಯಾಪಕ ವೃತ್ತಿಯಲ್ಲಿ ತೊಡಗಿದಾಗಲೂ ಪುಟ್ಟಪ್ಪನವರು ಹನ್ನೆರಡು ವರ್ಷಗಳ ಕಾಲ ಅಲ್ಲಿಯೇ ವಾಸವಾಗಿದ್ದರು.

ಪುಟ್ಟಪ್ಪನವರು ಕನ್ನಡ ಕವನಗಳು ಜನಪ್ರಿಯವಾದವು. ವಿದ್ಯಾರ್ಥಿಗಳು ಮಾತ್ರವಲ್ಲದೆ ಗುರುಗಳಾದ ಪ್ರೊ. ಟಿ.ಎಸ್.ವೆಂಕಣ್ಣಯ್ಯ , ಎ.ಆರ್.ಕೃಷ್ಣಶಾಸ್ತ್ರಿ ಮತ್ತು ಪ್ರೊ. ಬಿ.ಎಂ.ಶ್ರೀ ಮೊದಲಾದ ಮಹನೀಯರು ಮೆಚ್ಚಿ ಪ್ರಶಂಸಿಸಿದರು. ನಂತರ 1924 ರಲ್ಲಿ ಪುಟ್ಟಪ್ಪನವರು ಗಾಂಧೀಜಿಯವರ ದರ್ಶನ

ಪಡೆದರು. ರಾಜಕೀಯ ಇವರ ಮೇಲೆ ಏನೂ ಪ್ರಭಾವ ಬೀರಲಿಲ್ಲ. ಆಧ್ಯಾತ್ಮ-ಕಾವ್ಯ ಇವೆರಡು ಅವರ ಕಣ್ಣುಗಳಾದವು.

ಎಂ.ಎ. ತರಗತಿಯಲ್ಲಿ ಪುಟ್ಟಪ್ಪನವರು ಆರಿಸಿಕೊಂಡ ವಿಷಯ ತತ್ವಶಾಸ್ತ್ರ. ಆದರೆ ಪ್ರೊ. ಎ.ಆರ್.ಕೃಷ್ಣಶಾಸ್ತ್ರಿಯವರ ಒಲುಮೆಯಿಂದ ಕನ್ನಡ ಎಂ.ಎ.ಗೆ ಸೇರಿದರು. ಇದರಿಂದ ಕುವೆಂಪುರವರ ಬದುಕು ಬೇರೆ ದಿಕ್ಕನ್ನು ಬದಲಿಸಿದಂತೆ ಕನ್ನಡ ಸಾಹಿತ್ಯದ ದಿಕ್ಕು ಬದಲಾಯಿತು. ವಿದ್ಯಾರ್ಥಿಯಾಗಿಯೇ ಅನೇಕ ಕವನಗಳನ್ನು ರಚಿಸುತ್ತಾ ಹೋದರು. ಎ.ಆರ್.ಕೃಷ್ಣಶಾಸ್ತ್ರಿಗಳ ಒತ್ತಾಯದಿಂದ ಅವರು ಕವಿ ಸಮ್ಮೇಳನದ ಅಧ್ಯಕ್ಷತೆಯನ್ನೂ ವಹಿಸಿದರು.

ಎಂ.ಎ.ತರಗತಿಗೆ ಸೇರಿದ ಮೊದಲಲ್ಲಿ 'ಜಲಗಾರ' ನಂತರ 'ಯಮನ ಸೋಲು' ನಾಟಕಗಳನ್ನು ಪುಟ್ಟಪ್ಪನವರು ರಚಿಸಿದರು. 'ಸರಳ ರಗಳೆ' ಯನ್ನು ಮೊತ್ತ ಮೊದಲ ಬಾರಿಗೆ ಯಶಸ್ವಿಯಾಗಿ ನಾಟಕ ರಚನೆಗೆ ಬಳಸಿಕೊಂಡ ಕೀರ್ತಿ ಅವರದು. ಈಗಾಗಲೇ ಅವರು 'ಅಮಲನ ಕಥೆ' ಎಂಬ ಕಥನ ಕವನ ತಮ್ಮ ಕನ್ನಡ ಪುಸ್ತಕದಿಂದಲೂ; 'ಬೊಮ್ಮನಹಳ್ಳಿ ಕಿಂದರಿಜೋಗಿ' (ರಾಬರ್ಟ್ ಬ್ರೌನಿಂಗ್‌ನ The peied-piper of hamelin ಕೃತಿಯ ರೂಪಾಂತರ). ನೀಳ್ಗವನದಿಂದಲೂ ಕನ್ನಡ ನಾಡಿನ ಕಾವ್ಯಪ್ರಿಯರ ಹೃದಯದಲ್ಲಿ ಶಾಶ್ವತವಾದ ಸ್ಥಾನವನ್ನು ಗಳಿಸಿಕೊಂಡಿದ್ದರು.

1929 ಪುಟ್ಟಪ್ಪನವರು ಬದುಕಿನಲ್ಲಿ ಅತ್ಯಂತ ಮಹತ್ವದ ವರ್ಷ. ಅವರು ಎಂ.ಎ.ಪದವಿ ಪಡೆದಿದ್ದು ಮತ್ತು ಕನ್ನಡ ಅಧ್ಯಾಪಕರಾಗಿ ನೇಮಿಸಿದ ವರ್ಷ ಎಂದು ಮಾತ್ರವಲ್ಲ ಆಧ್ಯಾತ್ಮಿಕ ದೃಷ್ಟಿಯಿಂದಲೂ ಅದು ಅವರಿಗೆ ಮಹತ್ವದ ವರ್ಷ. ಸ್ವಾಮಿ ಸಿದ್ಧೇಶ್ವರಾನಂದರು ಪುಟ್ಟಪ್ಪನವರನ್ನು ಬಂಗಾಳದ ಬೇಲೂರು ಮಠದಲ್ಲಿ ಶ್ರೀ ಸ್ವಾಮಿ ಶಿವಾನಂದರಿಂದ ಮಂತ್ರದೀಕ್ಷೆ ಕೊಡಿಸಿದರು.

1930ರಲ್ಲಿ ಕುವೆಂಪುರವರ ಮೊಟ್ಟ ಮೊದಲ ಕವನ ಸಂಕಲನ 'ಕೊಳಲು' ಪ್ರಕಟವಾಯಿತು. ಬಿ.ಎಂ.ಶ್ರೀ ಯವರು ಮುನ್ನುಡಿಯಲ್ಲಿ ಸರಳಶೈಲಿ, ಭಾವೋದ್ರೇಕ, ಗೀತ ಪ್ರವಾಹ, ತಿರುಳುಗನ್ನಡ ನುಡಿಗಳು, ನೂರು ದೋಷಗಳಿದ್ದರೂ ಜೀವವಿದ್ದರೆ ಕಾವ್ಯ ಕಾವ್ಯವೇ, ಒಂದು ತಪ್ಪಿಲ್ಲದಿದ್ದರೂ ಜೀವವಿಲ್ಲದ ಕಾವ್ಯ ಕಾವ್ಯವೇ ಅಲ್ಲ. ಪುಟ್ಟಪ್ಪನವರ ಉತ್ತಮ ಕವನಗಳಲ್ಲಿ ಈ ಜೀವವಿದೆ, ಆತ್ಮವಿದೆ; ಇರುವುದರಿಂದ ಅಮೃತತ್ವದ ಸಾರವಿದೆ'' ಎಂದು ಹೇಳಿದ್ದಾರೆ.

1933ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಕವಿ ಸಮ್ಮೇಳನಕ್ಕೆ ಪುಟ್ಟಪ್ಪನವರು ಅಧ್ಯಕ್ಷರಾದರು. 1936ರಲ್ಲಿ ಅವರ ಖಂಡಕಾವ್ಯ 'ಚಿತ್ರಾಂಗದಾ' ಪ್ರಕಟವಾಯಿತು. ಮೊದಲ ಖಂಡಕಾವ್ಯ ವರ್ಣನೆಗಳ ಸ್ವಾರಸ್ಯಕ್ಕೆ ಸರಳರಗಳೆಯಲ್ಲಿ ಕಥೆಯನ್ನು ನಿರರ್ಗಳವಾಗಿ ಸಾಗಿಸಿಕೊಂಡು ಹೋಗಬಹುದು. ಉಪಮೆ, ಮಿಶ್ರೋಪಮೆ, ಮಹೋಪಮೆಗಳ ಮೊದಲ ಬಾರಿಗೆ ಕಾಣಿಸಿಕೊಂಡಿದ್ದು ಇಲ್ಲೇ. ಲಕ್ಷ್ಮೀಶನ ಚಿತ್ರಾಂಗದೆ ಮತ್ತು ರವೀಂದ್ರರ 'ಚಿತ್ರಾ' ಇವುಗಳಿಂದ ಸ್ಫೂರ್ತಿಗೊಂಡ ಕವಿ ಚಿತ್ರಾಂಗದೆ ರಚಿಸಿರುವುದು.

1937ರಲ್ಲಿ ಕುವೆಂಪು ಹೇಮಾವತಮ್ಮನವರನ್ನು ಮದುವೆಯಾದರು. ಕುವೆಂಪು ಪ್ರಧಾನತಃ ಕವಿ ಆದರೆ ಕಾದಂಬರಿಯು ಅನುಭವ ವಿಶೇಷದ ಅಭಿವ್ಯಕ್ತಿ ಮಾಧ್ಯಮವಾಗಬಹುದು ಎಂಬುದನ್ನು ಊಹಿಸುವುದೂ ಸಾಧ್ಯವಿರಲಿಲ್ಲ. ಅವರು ಥಾಮಸ್ ಹಾರ್ಡಿಯ 'ದಿ ರಿಟರ್ನ್ ಆಫ್ ದಿ ನೇಟಿವ್' ಅನ್‌ಟೋಲ್ ಫ್ರಾನ್ಸಿಸ್‌ನ 'ಥಾಯಿ', ಟಾಲ್‌ಸ್ಟಾಯ್ ಅವರ 'ರಿಸರೆಕ್ಷನ್' ಕಾದಂಬರಿಯನ್ನು ಓದಿದಾಗ ಮಲೆನಾಡಿನ ಪ್ರಕೃತಿ ಸೌಂದರ್ಯದಂತೆಯೇ ಜನಜೀವನವನ್ನು ತೆರೆದ ಕಣ್ಣುಗಳಿಂದ ತೆರೆದ ಹೃದಯದಿಂದ ನೋಡಿದ್ದ ಕವಿಗೆ ಕನ್ನಡದಲ್ಲಿ ಗಾತ್ರದಲ್ಲಿ ಬೃಹತ್ತಾದ ಗುಣದಲ್ಲಿ ಮಹತ್ವದ ಕಾದಂಬರಿಯನ್ನು ರಚಿಸಿದರು. 1933 ರಿಂದ 36 ರವರೆಗೆ ಅವರು ಕಾದಂಬರಿಯ ರಚನೆಯಲ್ಲಿ ತೊಡಗಿದರು. 1938ರಲ್ಲಿ 'ಕಾನೂರು ಹೆಗ್ಗಡಿತಿ' ಪ್ರಕಟವಾಯಿತು. ಕನ್ನಡದಲ್ಲಿ ದೊಡ್ಡ ಪ್ರಮಾಣದಲ್ಲಿ ರಚಿತವಾದ ಪ್ರಥಮ ಸಾಮಾಜಿಕ ಕಾದಂಬರಿ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಐವತ್ತು ಅರವತ್ತು ವರ್ಷಗಳ ಹಿಂದಿನ ಮಲೆನಾಡಿನ ಕಾಡುಬೆಟ್ಟಗಳ ಚಿತ್ರಣ, ಬೇಟೆ, ಜನಜೀವನದ ಆತ್ಮೀಯ ಪರಿಚಯ, ರಾಗ ದ್ವೇಷಗಳ ಪರಿಚಯ ಮಲೆನಾಡಿನ ವಿಶಿಷ್ಟವಾದ ಕನ್ನಡ ಭಾಷೆ ಸೊಬಗಿದೆ. ಇನ್ನೊಂದು ಕಾದಂಬರಿ 'ಮಲೆಗಳಲ್ಲಿ ಮದುಮಗಳು' 'ಕಾನೂರು ಹೆಗ್ಗಡಿತಿ' ಪ್ರಕಟವಾದ ಮೂವತ್ತು ವರ್ಷಗಳ ಬಳಕ ಪ್ರಕಟವಾಯಿತು. ಮೊದಲ ಕಾದಂಬರಿಗಿಂತ ಗಾತ್ರದಲ್ಲಿ ದೊಡ್ಡದು. ಬದುಕಿನ ಯಥಾಸ್ಥಿತಿಯನ್ನು ತೆರೆದು ತೋರಿಸಿದ್ದಾರೆ.

1930ರಲ್ಲಿಯೇ 'ಸಮುದ್ರಲಂಘನವೇ' ಎಂಬ ಖಂಡಕಾವ್ಯವನ್ನು ಸಾಂಪ್ರದಾಯಿಕ ಛಂದಸ್ಸಿನಲ್ಲಿ ರಚಿಸಿದರು. 1939ರಲ್ಲಿ ಕನ್ನಡ ಉಪ ಪ್ರಾಧ್ಯಾಪಕರಾಗಿ ಬಡ್ತಿ ಪಡೆದ ಕುವೆಂಪು 1945ರಲ್ಲಿ ಕನ್ನಡ ಪ್ರಾಧ್ಯಾಪಕರೂ ಇಲಾಖೆಯ ಮುಖ್ಯಸ್ಥರೂ ಆಗಿ ನೇಮಕಗೊಂಡರು. 1949ರಲ್ಲಿ ಮಹಾಛಂದಸ್ಸಿನಲ್ಲಿ 'ಶ್ರೀ ರಾಮಾಯಣ ದರ್ಶನಂ' ಪ್ರಕಟವಾಯಿತು. ಕನ್ನಡವನ್ನು ವಿಶ್ವ ಸಾಹಿತ್ಯದ ಉನ್ನತ ವೇದಿಕೆಯಲ್ಲಿ ಸ್ಥಾಪಿಸಿರುವ ಕೃತಿಯಾಗಿದೆ. ಕುವೆಂಪು ಷೇಕ್ಸ್‌ಪಿಯರನ ಎರಡು ನಾಟಕಗಳನ್ನು ರೂಪಾಂತರಗೊಳಿಸಿ ಕನ್ನಡಿಗರಿಗೆ ನೀಡಿದ್ದಾರೆ. 'ದಿ ಟೆಂಪೆಸ್ಟ್' ನಾಟಕವನ್ನು 'ಬಿರುಗಾಳಿ' ಎಂಬ ಹೆಸರಿನಿಂದಲೂ 'ಹ್ಯಾಮ್ಲೆಟ್' ನಾಟಕವನ್ನು 'ರಕ್ತಾಕ್ಷಿ' ಎಂಬ ಹೆಸರಿನಿಂದಲೂ , ಟೆಂಪೆಸ್ಟ್ ಉತ್ತಮ ಕೃತಿ ನಾಟಕದಲ್ಲಿ ಭಾವಕ ಸಾಂದ್ರತೆ, ದ್ವೇಷಕ್ಕಿಂತ ಕ್ಷಮೆಯೇ ಮುಖ್ಯ ಎಂಬ ಭಾವನೆ ಪುಟ್ಟಪ್ಪನವರನ್ನು ಆಕರ್ಷಿಸಿದೆ. ಮೂಲದಿಂದ ಕುವೆಂಪುರವರು ಮಾಡಿರುವ ಅಲ್ಪಸ್ವಲ್ಪ ಬದಲಾವಣೆ ಕೃತಿಯ ಸತ್ವವನ್ನು ಹೆಚ್ಚಿಸಿದೆ. ರಕ್ತಾಕ್ಷಿ, ಹ್ಯಾಮ್ಲೆಟ್ ನಾಟಕದ ವಸ್ತುವಾದರೂ ಸ್ವತಂತ್ರವಾಗಿ ಓದಿಸಿಕೊಂಡು ಹೋಗುತ್ತದೆ. ಲಕ್ಷ್ಮೀಶನ ಸೀತಾ ಪರಿತ್ಯಾಗದ ಭಾಗದಿಂದ ಪ್ರೇರಿತವಾದ ನಾಟಕ 1931ರಲ್ಲಿ 'ವಾಲ್ಮೀಕಿಯ ಭಾಗ್ಯ', ಮಕ್ಕಳ ನಾಟಕ 'ನನ್ನ ಗೋಪಾಲ' ಇದೇ ಅವಧಿಯಲ್ಲಿ ರಚಿಸಿದರು. ಮತ್ತೊಂದು 'ಶ್ಮಶಾನ ಕುರುಕ್ಷೇತ್ರದ' ನಾಟಕವನ್ನು ಕುರಿತು ಹೇಳಿರುವ ಮಾತುಗಳು ನಾಟಕದ ಸ್ವರೂಪ ಉದ್ದೇಶವನ್ನು ವಿವರಿಸುತ್ತದೆ. ಯುದ್ಧದ ದುರಂತತೆ, ಅನ್ಯಾಯ, ಕ್ರೌರ್ಯ , ವಿನಾಶನ, ಅವಿವೇಕ, ದುರ್ಲಂಘ್ಯ ವಿಧಿ, ಸರ್ವ ವಿಫಲತೆ, ಸಂಸ್ಕೃತಿಯ ಸಾವು ಇದಕ್ಕೆ ಪ್ರತಿಮೆ.

ಕಲೆಯ ದೃಷ್ಟಿಯಿಂದಲೂ ದರ್ಶನ ದೃಷ್ಟಿಯಿಂದಲೂ ಅತ್ಯಂತ ಉತ್ತಮವಾದದ್ದು. ಬೆರಳ್‌ಗೆ ಕೊರಳ್. ಅಲ್ಲಿನ ಮೂರು ದೃಶ್ಯಗಳನ್ನು ಕವಿ 'ಗುರು', 'ಕರ್ಮ' ಜಗತ್ತು ಯಜ್ಞ ಎಂದು ಕರೆದಿದ್ದಾರೆ.

ಕುವೆಂಪು ಸಾವಿರಾರು ಕವನಗಳನ್ನು ರಚಿಸಿದ್ದಾರೆ. ಕಾದಂಬರಿ, ಕಥೆ, ವಿಚಾರ ಸಾಹಿತ್ಯ , ನಾಟಕಗಳು ಈ ಎಲ್ಲ ಸಾಹಿತ್ಯ ವಿಚಾರಗಳಿಗೂ ಅವರ ಕೊಡುಗೆ ಮಹತ್ತರವಾಗಿದೆ. ಅವರೂ ಪ್ರಧಾನತಃ ವಿಚಾರಶೀಲ ವ್ಯಕ್ತಿತ್ವ , ಕ್ರಾಂತಿಕಾರಕ ಮನೋಭಾವ, ಸಮಾಜದಲ್ಲಿನ ವಿಧವಾದ ಅಸಮಾನತೆಗಳೂ ಹೋಗಬೇಕು ಎಂದು ಉಗ್ರವಾಗಿ ಗದ್ಯದಲ್ಲಿ ಪದ್ಯದಲ್ಲಿ ವಾದಿಸಿದ್ದಾರೆ. ಜಾತಿಪದ್ಧತಿ ನಿರ್ಮೂಲಗೊಳ್ಳದೆ ಈ ದೇಶದ ಉದ್ಧಾರ ಅಸಾಧ್ಯ ಎಂದು ಹೇಳಿದ್ದಾರೆ. ಜಾತಿ, ಮತ, ದೇಶ, ಭಾಷೆ ಇವುಗಳಿಂದ ಹೊರಬಂದು ಮನುಷ್ಯ ವಿಶ್ವ ಮಾನವನಾಗುತ್ತಾನೆ ಎಂದು ಹೇಳಿದ್ದಾರೆ.

ಕನ್ನಡದ ಜನತೆ ಸರ್ಕಾರ ವಿಶ್ವವಿದ್ಯಾನಿಲಯಗಳು ಕೇಂದ್ರ ಸರ್ಕಾರ, ರಾಜ್ಯ ಸಾಹಿತ್ಯ ಅಕಾಡೆಮಿ, ಕೇಂದ್ರ ಸಾಹಿತ್ಯ ಅಕಾಡೆಮಿ ಗೌರವಗಳನ್ನು ನೀಡಿದೆ. 1955ರಲ್ಲಿ ಕುವೆಂಪು ಓದಿದ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿದ್ದ ಮೈಸೂರು ಮಹಾರಾಜ ಕಾಲೇಜಿನ ಪ್ರಾಂಶುಪಾಲರಾದರು. ಅದೇ ವರ್ಷ ಶ್ರೀ ರಾಮಾಯಣ ದರ್ಶನಂಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಕನ್ನಡಕ್ಕೆ ಪ್ರಥಮವಾಗಿ ದೊರಕಿತು. 1956ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವೂ 1966ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯವೂ 1969ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯವೂ 1985ರಲ್ಲಿ ಗುಲ್ಬರ್ಗ ವಿಶ್ವವಿದ್ಯಾಲಯವೂ ಗೌರವ ಡಿಲಿಟ್ ಪದವಿಯನ್ನು ನೀಡಿದುವು. 1956ರಲ್ಲಿ ಮೈಸೂರು ವಿದ್ಯಾನಿಲಯದ ಉಪಕುಲಪತಿಗಳಾಗಿ ನೇಮಕಗೊಂಡರು. 1957ರಲ್ಲಿ ಧಾರವಾಡದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. 1958ರಲ್ಲಿ ಭಾರತ ಸರ್ಕಾರವು ಪದ್ಮಭೂಷಣ ಪ್ರಶಸ್ತಿ ನೀಡಿತು. 1964ರಲ್ಲಿ ಕರ್ನಾಟಕ ಸರ್ಕಾರ ರಾಷ್ಟ್ರಕವಿ ಎಂದು ಘೋಷಿಸಿದರು. 1968ರಲ್ಲಿ ಅವರ ಶಿಷ್ಯರೂ ಅಭಿಮಾನಿಗಳೂ ಗಂಗೋತ್ರಿ ಎಂಬ ಗೌರವ ಗ್ರಂಥವನ್ನು ಅರ್ಪಿಸಿದರು. ಶ್ರೀ ರಾಮಾಯಣ ದರ್ಶನಂ ಗೆ ಜ್ಞಾನಪೀಠ ಪ್ರಶಸ್ತಿ ದೊರಕಿತು. ಪಂಪ ಪ್ರಶಸ್ತಿಯ ಪ್ರಥಮ ಪುರಸ್ಕಾರವೂ 1988ರಲ್ಲಿ ದೊರೆಯಿತು. 1985ರಲ್ಲಿ ಮೊದಲನೇ ವಿಶ್ವಕನ್ನಡ ಸಾಹಿತ್ಯ ಸಮ್ಮೇಳನ (ಮೈಸೂರು) ಉದ್ಘಾಟಿಸಿದರು. 10–11–1994 ರಲ್ಲಿ ನಿಧನರಾದರು.

**********

## III. ಕುವೆಂಪು ಕಾದಂಬರಿಗಳ ಸ್ವರೂಪ :–

ಕುವೆಂಪು ಅವರು ಮಹಾಕವಿ ಎಂತೋ ಅಂತೆಯೇ ಮಹಾಕಾದಂಬರಿಕಾರರೂ ಹೌದು. ಅವರನ್ನು ಮಹಾಕವಿ ಎನ್ನುವುದನ್ನು ಒಪ್ಪಿಕೊಳ್ಳಲು ಮನಸ್ಸೊಗ್ಗದ ಕೆಲವು ವಿಮರ್ಶಕರು ಅಡ್ಡದಾರಿ ಹಿಡಿದು ತಮ್ಮನ್ನು ಟೀಕಾಕಾರರಿಂದ ರಕ್ಷಿಸಿಕೊಳ್ಳಲು ಕುವೆಂಪು ಅವರನ್ನು ಮಹಾಕಾದಂಬರಿಕಾರರು ಎಂದು ಕರೆದರು.

ಕುವೆಂಪು ಅವರು ಬರೆದದ್ದೆ ಎರಡು ಕಾದಂಬರಿಗಳು ಒಂದು 'ಕಾನೂರು ಹೆಗ್ಗಡಿತಿ', ಮತ್ತೊಂದು 'ಮಲೆಗಳಲ್ಲಿ ಮದುಮಗಳು' ಮೊದಲನೇ ಕಾದಂಬರಿಯನ್ನು 1936ರಲ್ಲಿ ಪ್ರಕಟಿಸಿದರು. 81 ಅಧ್ಯಾಯಗಳ 591 ಪುಟಗಳ ಬೃಹತ್ ಕಾದಂಬರಿ 12 ಆವೃತ್ತಿಗಳನ್ನು ಇಲ್ಲಿಯವರೆಗೆ ಕಂಡಿದೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯನ್ನು 1967ರಲ್ಲಿ ಅಂದರೆ ಮೊದಲನೆ ಕಾದಂಬರಿ ಹೊರಬಂದ ಮೂರು ದಶಕಗಳ ಆನಂತರ ಬಿಡುಗಡೆ ಮಾಡಿದರು. 64 ಅಧ್ಯಾಯ 700ಕ್ಕೂ ಮಿಕ್ಕು ಪುಟಗಳಷ್ಟು ವಿಸ್ತೃತವಾಗಿದೆ, 8 ಆವೃತ್ತಿಗಳನ್ನು ಕಂಡಿದೆ.

ವಾಸ್ತವದಲ್ಲಿ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯೇ ಮೊದಲು ಬರವಣಿಗೆಗೆ ಕೈಹಾಕಿದ್ದು , ಆದರೆ ಇದನ್ನು ಪೂರ್ಣಗೊಳಿಸದ ಕುವೆಂಪು ಕಾನೂರು ಹೆಗ್ಗಡಿತಿಯನ್ನು ಕೈಗೆತ್ತಿಕೊಂಡು ಅದನ್ನು ಮೊದಲು ಪ್ರಕಟಿಸಿದರು. ಹೀಗಾಗಿ ರಚನೆಯ ಮತ್ತು ಪ್ರಕಟಣೆಯ ದೃಷ್ಟಿಯಿಂದ ಕಾನೂರು ಹೆಗ್ಗಡಿತಿ ತರುವಾಯ ಮಲೆಗಳಲ್ಲಿ ಮದುಮಗಳು ಪ್ರಕಟಗೊಂಡಿದ್ದರೂ ವಸ್ತುವಿನ ದೃಷ್ಟಿಯಿಂದ ಅದಕ್ಕಿಂತ ಹಿಂದಿನದು ಎಂಬುದನ್ನು ಕಾದಂಬರಿಗಳಲ್ಲಿ ಬರುವ ಕಾಲಮಾನದ ವಿವರಗಳಿಂದಲೇ ಗ್ರಹಿಸಬಹುದಾಗಿದೆ.

19ನೇ ಶತಮಾನದ ಕೊನೆಯ ಹಾಗೂ 20ನೇ ಶತಮಾನದ ಆದಿಭಾಗದಲ್ಲಿ ಕಂಡುಬರುವ ಮಲೆನಾಡಿನ ಜೀವನಚಿತ್ರಣವನ್ನು ನಾವೀ ಕಾದಂಬರಿಗಳಲ್ಲಿ ಕಾಣಬಹುದು. ''ಕುವೆಂಪು ಭಾವಗೀತೆಗಳಲ್ಲಿ ಬಿಂದು ಮಾತ್ರವಾಗಿ ಕತೆಗಳಲ್ಲಿ ಸಣ್ಣ ನಿರ್ಝರಿಣಿಯಾಗಿ ಕಾಣಿಸಿಕೊಂಡ ಮಲೆನಾಡು ಈ ಕಾದಂಬರಿಗಳಲ್ಲಿ ತನ್ನ ವಿರಾಟ್ ಸ್ವರೂಪವನ್ನು ಅನಾವರಣ ಮಾಡಿಕೊಂಡಿದೆ. ಎರಡು ಕಾದಂಬರಿಗಳಲ್ಲೂ ಕಾಡು ಪ್ರಧಾನ ಪಾತ್ರವಾಗಿದೆ. ಕೃತಿಯಲ್ಲಿನ ಎಲ್ಲಾ ವ್ಯಕ್ತಿಗಳನ್ನೂ, ಸನ್ನಿವೇಶಗಳನ್ನು ರೂಪಿಸುವ ಕಡೆಯುವ ಸೂತ್ರದಾಯಕ ಶಕ್ತಿಯಾಗಿದೆ.

ಮಲೆನಾಡಿನ ವಿವಿಧ ಜಾತಿ, ವರ್ಗದ, ಸ್ತರದ, ವಿವಿಧ ಸಂಸ್ಕಾರದ, ಸಂಪ್ರದಾಯದ ಜನಜೀವನವನ್ನು, ಅದರೆಲ್ಲಾ ಸಹಜತೆ, ವಿವಿಧತೆ, ಸಂಕೀರ್ಣತೆ ಹಾಗೂ ವಿಸ್ತಾರದೊಡನೆ ಅದ್ಭುತವಾಗಿ ಶಕ್ತಿಪೂರ್ಣವಾಗಿ ಕಲಾತ್ಮಕವಾಗಿ ಚಿತ್ರಿಸುತ್ತದೆ ಈ ಕಾದಂಬರಿಗಳು.''[೧]

---

೧. ಎಚ್.ಜೆ. ಲಕ್ಕಪ್ಪಗೌಡ – ವಿಶ್ವಕವಿ ಕುವೆಂಪು , ಪುಟ ೪೯

ಹೊಸ ನಾಗರಿಕತೆಯ ಪ್ರಭಾವಕ್ಕೆ ಒಳಗಾದ ಮುಂಚಿನ ಸಮಾಜದ ಬದುಕು ಈ ಕಾದಂಬರಿಗಳಲ್ಲಿ ಅನಾವರಣಗೊಂಡಿದೆ. ಕುವೆಂಪು ಈ ಕಾದಂಬರಿಗಳಲ್ಲಿ ಆಚಾರ ಅನಾಚಾರಗಳನ್ನು ಎತ್ತಿ ತೋರಿಸುತ್ತಾ ಆಧುನಿಕ ಸೌಲಭ್ಯಗಳನ್ನು ಸ್ವೀಕರಿಸುವಲ್ಲಿ ಮನಸ್ಸಿನ ದ್ವಂದ್ವಾತ್ಮಕತೆಯನ್ನು ಚೆನ್ನಾಗಿ ಚಿತ್ರಿಸಿದ್ದಾರೆ.

ಹಳೆಯದನ್ನು ಬಿಡಲಾಗದ ಹೊಸದನ್ನು ಅನಾಮತ್ತಾಗಿ ಸ್ವೀಕರಿಸಲಾಗದ ಜನರ ಡೋಲಾಯಮಾನ ಮನಸ್ಥಿತಿಯನ್ನು ಕುವೆಂಪುರವರು ಕಾದಂಬರಿಗಳಲ್ಲಿ ಚಿತ್ರಿಸುವಲ್ಲಿ ಯಶಸ್ವಿಯಾಗಿದ್ದಾರೆ. ಆದರೂ ಕುವೆಂಪು ಕಾನೂರು ಹೆಗ್ಗಡಿತಿ ಕಾದಂಬರಿಯ ಅರಕೆಯಲ್ಲಿ ''ಕಾದಂಬರಿಯು ಕರತಲ ರಂಗಭೂಮಿ, ಅಂಗೈ ಮೇಲಣ ನಾಟಕಶಾಲೆ. ಆದ್ದರಿಂದ ಕಾದಂಬರಿಯನ್ನು ಓದುವ ವಾಚಕರು ನಾಟಕವನ್ನು ನೋಡುವ ಪ್ರೇಕ್ಷಕರೂ ಆಗಬೇಕಾಗುತ್ತದೆ.

ವಾಚಕರ ಕಲ್ಪನೆ ಸದಾ ಎಚ್ಚೆತ್ತಿರಬೇಕು. ಅದು ನಿದ್ದೆ ಮಾಡುವುದಿರಲಿ, ತೂಕಡಿಸಿದರೂ ರಸ ಸ್ವಾದನೆಗೆ ಭಂಗ ಬರುತ್ತವೆ. ಆದ್ದರಿಂದ ಕಥೆಯ ಕೋಲಾಹಲಕ್ಕಾಗಿ ಓದಬೇಡಿ ಸಾವಧಾನವಾಗಿ ಸಚಿತ್ರವಾಗಿ ಸಜೀವವಾಗಿ ಓದಿ. ಇಲ್ಲಿ ಚಿತ್ರಿತವಾಗಿರುವುದು ಮಲೆನಾಡಿನ ಬಾಳಿನ ಕಡಲಿನಲ್ಲಿ ಒಂದು ಹನಿ ಮಾತ್ರ.''[೧]

ನಿಜ ಕಾದಂಬರಿಯನ್ನು ಓದುವಾಗ ನಮ್ಮ ಕಲ್ಪನೆ ಜಾಗೃತವಾಗಿದ್ದರೆ ಕಾದಂಬರಿಯ ಪ್ರತಿ ಸನ್ನಿವೇಶವೂ ಪ್ರತಿ ವ್ಯಕ್ತಿಯೂ ನಮ್ಮ ಕಣ್ಣಿನ ಮುಂದೆ ಬಂದು ನಿಂತಂತೆ ಭಾಸವಾಗುತ್ತದೆ.

ಎರಡೂ ಕಾದಂಬರಿಗಳಲ್ಲಿ ಕುವೆಂಪುರವರ ಬಾಲ್ಯದ ದಟ್ಟ ಅನುಭವಗಳಿವೆ. ಮನಸ್ಸಿನಲ್ಲಿ ಅಚ್ಚೊತ್ತಿದ್ದ ಬಾಲ್ಯದ ನೆನಪು ಕಾದಂಬರಿಯನ್ನು ಬರೆಯುವ ಕಾಲದಲ್ಲಿ ಅನುಭವಗಳು ಬಿಚ್ಚಿಕೊಂಡು ಕೃತಿಗಳಿಗೆ ಹೊಸತನವನ್ನು ತಂದುಕೊಟ್ಟಿವೆ. ಕಾದಂಬರಿಕಾರರ ಉದ್ದೇಶ ಮನರಂಜನೆ ಅಲ್ಲ. ಗ್ರಹಿಸಬೇಕಾದುದು ಒಂದು ಜ್ವಲಂತ ಸಾಂಸ್ಕೃತಿಕ ಬದುಕನ್ನು ಅದು ಬಿಟ್ಟುಕೊಡುವ ಸಾಮಾಜಿಕ ಗತಿಬಿಂಬವನ್ನು.

'ಕಾನೂರು ಹೆಗ್ಗಡಿತಿ'ಯಲ್ಲು ಸುಧಾರಣೆಯ ಬೆಳಕು. ಪರಿವರ್ತನೆಯ ದಾರಿ ಹೊರಗಿನಿಂದ ವಿದ್ಯಾಭ್ಯಾಸ ಮಾಡಿಬಂದ ಯುವಕರಾದ ಹೂವಯ್ಯ, ರಾಮಯ್ಯರ ಮೂಲಕ ಮಲೆನಾಡನ್ನು ಪ್ರವೇಶಿಸುತ್ತದೆ. ಆದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಪರಿವರ್ತನೆಯ ಬೆಳಕು ಹರಿದಿದೆ. ಎಲ್ಲಾ ಪಾತ್ರಗಳೂ ಧ್ಯೇಯಕ್ಕಾಗಿ ದುಡಿದಿವೆ. ಆದರೆ ಪರಿವರ್ತನೆ ಕಣ್ಣಿಗೆ ಕಾಣದಷ್ಟು ನಿಧಾನಗತಿಯಲ್ಲಿ ಸಾಗುತ್ತದೆ.

'ಕಾನೂರು ಹೆಗ್ಗಡಿತಿ' ಯಲ್ಲಿ ಹೂವಯ್ಯ ಕೇಂದ್ರಪ್ರಜ್ಞೆ. ಓದುಗರನ್ನು ಅದು ಸೆರೆಹಿಡಿಯುತ್ತದೆ, ನಿಯಂತ್ರಿಸುತ್ತದೆ. ಆದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಅಂತಹ ಯಾವ ಕೇಂದ್ರ

---

೧. ಕಾನೂರು ಹೆಗ್ಗಡಿತಿ – ಕುವೆಂಪು (ಅರಿಕೆ)

ಪ್ರಜ್ಞೆಯೂ ಇಲ್ಲ. ಕನ್ನಡದಲ್ಲಿ ಇದು ಮೊದಲ ಪ್ರಯೋಗ. ಅಂತಲೇ ಕಾದಂಬರಿಯ ಪ್ರಾರಂಭದಲ್ಲಿ ಕುವೆಂಪು ಅವರು ಓದುಗರಿಗೆ ಬರೆದ ಸಾಲುಗಳು ಅತ್ಯಂತ ಧ್ವನಿಪೂರ್ಣವಾದವು.

''ಇಲ್ಲಿ ಯಾರೂ ಮುಖ್ಯರಲ್ಲ;
ಯಾವುದೂ ಯಃಕಶ್ಚಿತವಲ್ಲ;
................
ಇಲ್ಲಿ
    ಎಲ್ಲಕ್ಕೂ ಇದೇ ಅರ್ಥ
    ಯಾವುದೂ ಅಲ್ಲ ವ್ಯರ್ಥ
    ನೀರೆಲ್ಲ ಊ ತೀರ್ಥ''[೧]

ಇಲ್ಲಿನ ಒಂದೊಂದು ಸಾಲುಗಳೂ ಕಾದಂಬರಿಯನ್ನು ಅರ್ಥ ಮಾಡಿಕೊಳ್ಳಲು ಸಹಾಯವಾಗಿದೆ. ಕುವೆಂಪು ಅವರು 'ಪ್ರಸ್ಥಿತ ಬ್ರಹ್ಮಸೃಷ್ಟಿಗೆ ಪರ್ಯಾಯವಾದ ತ್ರಿಶಂಕುವಲ್ಲದ ವಿಶ್ವಮಿತ್ರ ಸೃಷ್ಟಿಯನ್ನು ನಿರ್ಮಿಸಿದ್ದಾರೆ''[೨] ಎಂದಿದ್ದಾರೆ. ನವೋದಯ ಕಾಲದ ಸುಧಾರಣೆ ಆದರ್ಶ, ರಮ್ಯತೆ ಮುಂತಾದ ಪರಿಕಲ್ಪನೆಗಳನ್ನು ಕಾನೂರು ಹೆಗ್ಗಡಿತಿಯಲ್ಲಿ ಕಾಣಬಹುದು. ಥಾಮಸ್ ಹಾರ್ಡಿಯ Return of the native ಪ್ರಭಾವ ಈ ಕಾದಂಬರಿಯ ಮೇಲಾಗಿರುವುದನ್ನು ವಿಮರ್ಶಕರು ಗುರುತಿಸಿದ್ದಾರೆ. ಕೆ.ಡಿ. ಕುರ್ತುಕೋಟಿಯವರು ಈ ಕಾದಂಬರಿಯನ್ನು ಕುರಿತು '' ಈ ಕಾದಂಬರಿಯನ್ನು ಒಮ್ಮೆ ಓದಿಬಿಟ್ಟರೆ ಸಾಕು ಒಂದು ಜನಾಂಗದ ಆಚಾರ-ವಿಚಾರಗಳ ನಡವಳಿಕೆಯ ರಾಗದ್ವೇಷಗಳ ಆಳವಾದ ಆತ್ಮೀಯವಾದ ಪರಿಚಯ ಓದುಗನಿಗಾಗುತ್ತದೆ. ಇದರಲ್ಲಿ ಉಕ್ಕುವ ಚೈತನ್ಯ ಕನ್ನಡ ಕಾದಂಬರಿಯ ಕ್ಷೇತ್ರದಲ್ಲಿ ಮತ್ತೊಂದಿಲ್ಲ.... ಇದು ಕುವೆಂಪು ಬರೆದ ಮಹಾಕಾವ್ಯ ಎಂದಿದ್ದಾರೆ.''[೩]

'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಕಾದಂಬರಿಯನ್ನು ಓದಿದಾಗ ಕುವೆಂಪು ಮಲೆನಾಡನ್ನು ಮಧುರವಾಗಿ ಹಾಡುವ ಹಕ್ಕಿ ಮಾತ್ರವಲ್ಲ ಸರ್ವಕಾಲಿಕ ಸಾರ್ವಲೌಕಿಕವಾಗಿ ಬಲ್ಲಂತಹ ಮಹಾಗದ್ಯ ಕೃತಿಯನ್ನು ರಚಿಸಬಲ್ಲಂತಹ ಹಿರಿಯ ಕಾದಂಬರಿಕಾರರು ಅನೇಕ ರೂಪಕ, ಪ್ರಕೃತಿ ವರ್ಣನೆ ಇರುವ ಬೃಹತ್ ಕಾದಂಬರಿಯಲ್ಲಿ ಕಾವ್ಯಮಯವಾದ ಕಾದಂಬರಿ. ಮಲೆನಾಡಿನ ಜನಜೀವನದ ಕತೆ, ಕಾವ್ಯಮಯ ಶಬ್ದಜಾಲ ನಮ್ಮನ್ನು ಬೇರೆಯೇ ಲೋಕಕ್ಕೆ ಕರೆದೊಯ್ಯುತ್ತದೆ. ಈ ಬಗೆಯ ಕೃತಿಗಳನ್ನು ಪ್ರಾದೇಶಿಕ ಕಾದಂಬರಿ ಎಂದು ಕರೆಯುತ್ತಾರೆ.

ಇಂಗ್ಲೀಷಿನಲ್ಲಿ ಸ್ಕಾಟನ್ ವೆವರ್ಲಿ ಕಾದಂಬರಿಗಳು ಹಾರ್ಡಿಯ ವೆಜೆಕ್ಸ್ ಕಾದಂಬರಿಗಳು ಬಂದ ಹಾಗೆ ಕನ್ನಡದಲ್ಲಿ ಬಂದ ಮೊತ್ತ ಮೊದಲನೆಯ ಪ್ರಾದೇಶಿಕ ಕಾದಂಬರಿ 'ಕಾನೂರು ಹೆಗ್ಗಡಿತಿ' ಕುವೆಂಪು ಅವರು ಮಲೆನಾಡಿನ ಜನಜೀವನವನ್ನು ಅದರ ವಿವಿಧತೆ ವಿಶಾಲತೆ ಜಟಿಲತೆ ವೈಚಿತ್ರಗಳನ್ನು ಅತ್ಯಂತ ಆತ್ಮೀಯತೆಯಿಂದಲೂ ಪ್ರಾಮಾಣಿಕತೆಯಿಂದಲೂ ಅವರು ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಪ್ರಾದೇಶಿಕತೆ ಸಂಕುಚಿತವಾದುದಾದರೆ ಕೃತಿಗೆ ಕುಂದು ಬರುತ್ತದೆ. ಕುವೆಂಪು ಪ್ರಾದೇಶಿಕತೆ ಅಂಥದ್ದಲ್ಲ.

---

೧.ಮಲೆಗಳಲ್ಲಿ ಮದುಮಗಳು -ಕುವೆಂಪು (ಓದುಗರಿಗೆ)
೨.ಕುವೆಂಪು ಅನುಸಂಧಾನ -ಪ್ರೊ. ಸೋಮಶೇಖರಗೌಡ , ಪುಟ-೭೬
೩.ಯುಗಧರ್ಮ ಹಾಗೂ ಸಾಹಿತ್ಯದರ್ಶನ-ಕೀರ್ತಿನಾಥ ಕುರ್ತುಕೋಟಿ, ಪುಟ ೨೩೯

ಮಲೆನಾಡಿನ ಪ್ರೇಮದಲ್ಲಿ 'ಕುರುಡು ಮೋಹದಲ್ಲಿ' ಮೈಮರೆತರೂ ಅವರು ಹೊರಗಣ ಜಗತ್ತನ್ನ ಮರೆತಿಲ್ಲ. ಮಲೆನಾಡನ್ನು ಪ್ರೀತಿಸುವ ಅವರ ಹೃದಯ ಅಖಿಲ ವಿಶ್ವವನ್ನು ಆಲಂಗಿಸುತ್ತದೆ. ಮಾನವ ಜನಾಂಗಕ್ಕೆಲ್ಲ ಸಾಮಾನ್ಯವಾಗಿ ಅನ್ವಯಿಸುವ ರಸಭಾವಗಳ ಅನ್ಯಾದೃಶ ಚಿತ್ರಣದಿಂದಾಗಿ ಈ ಕೃತಿ ಪ್ರಾದೇಶಿಕ ರೂಪ ತಳೆದೂ ವಿಶ್ವವ್ಯಾಪಕ ಕೃತಿಯಾಗಿ ಪರಿಣಮಿಸಿದೆ. ಉತ್ತಮ ಕಲಾಕೃತಿ ಜೀವನದ ಪ್ರತಿಬಿಂಬವಾಗಿರುವಂತೆ ಜೀವನಕ್ಕೆ ಮಾರ್ಗದರ್ಶಕವಾದುದೂ ಆಗಿರುತ್ತದೆ. ಆದ್ದರಿಂದಲೇ ಕುವೆಂಪು ಅವರು ಕರ್ನಾಟಕದ ಹಾರ್ದಿಯಾಗಿದ್ದಾರೆ. ಜೀವನ ಹೇಗಿದೆಯೆಂಬುದನ್ನು ತಿಳಿಸುವುದರ ಜತೆಯಲ್ಲೇ ಜೀವನ ಹೇಗೆ ಇರಬೇಕು ಎಂಬುದನ್ನು ಅದು ಸೂಚ್ಯವಾಗಿ ತಿಳಿಸುತ್ತದೆ. ಕಾದಂಬರಿಯಲ್ಲಿ ವಾಸ್ತವಿಕತೆ ಆದರ್ಶ ಕನಸುಗಳ ಸುಂದರ ಸಮ್ಮಿಳನವಾದಾಗಲೇ ಅದು ಶ್ರೇಷ್ಠ ಕೃತಿಯಾಗಿ ಪರಿಣಮಿಸುತ್ತದೆ ಅಂಥ ಕೃತಿರತ್ನವೇ 'ಕಾನೂರು ಹೆಗ್ಗಡಿತಿ'.

ಈ ಕಾದಂಬರಿಯ ಕಥೆ ಜರುಗುವುದು ಕಾನೂರಿನಲ್ಲಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ಆ ಭಾಗದಲ್ಲೆಲ್ಲ ಹಿರಿಯ ಹಾಗೂ ಶ್ರೀಮಂತ ಮನೆತನವೆನ್ನಿಸಿದ ಕಾನೂರು ಮನೆತನವು ಹಲವು ಕಾರಣಗಳಿಂದ ಒಡೆದು ಇಬ್ಭಾಗವಾಗಿ ಕೆಲದಿನಗಳ ತರುವಾಯ ಮತ್ತೆ ಒಂದಾಗುವುದೇ ಕಥೆಯ ಮುಖ್ಯ ಸೂತ್ರ. ಈ ಸೂತ್ರದ ಸುತ್ತಲೂ ಕಥೆ ಕಟ್ಟಲ್ಪಟ್ಟಿದೆ ಚಂದ್ರಯ್ಯಗೌಡರು, ಸುಬ್ಬಮ್ಮ, ಹೂವಯ್ಯ, ರಾಮಯ್ಯ, ಸೀತೆ ಇವರುಗಳ ಸುತ್ತ ತಿರುಗುತ್ತದೆ.

ಕಾದಂಬರಿಗೆ ಹೆಸರನ್ನು ಕೊಟ್ಟಿರುವ ಸುಬ್ಬಮ್ಮನನ್ನು ಕೈಹಿಡಿದ ಕಾರಣದಿಂದ ಚಂದ್ರಯ್ಯಗೌಡರನ್ನ ನಾಯಕರು ಎನ್ನಲಾಗುವುದಿಲ್ಲ. ಹೂವಯ್ಯ ನಾಯಕ, ಸೀತೆ ನಾಯಕಿ, ಚಂದ್ರಯ್ಯಗೌಡ ಪ್ರತಿನಾಯಕ, ಸುಬ್ಬಮ್ಮ ದುರಂತ ನಾಯಕಿಯೆಂದೂ ರಾಮಯ್ಯ ಉಪನಾಯಕ ಎಂದು ಕರೆಯಬಹುದು.

ಚಂದ್ರಯ್ಯಗೌಡ ಸುಬ್ಬಮ್ಮ, ರಾಮಯ್ಯನ ಬದುಕು ದುರಂತವಾಗಲು ಹೇಗೆ ಪರಿಸ್ಥಿತಿ, ವಿಧಿ, ಅಜ್ಞಾನ, ಅಸೂಯೆ, ಅಸಂಸ್ಕೃತಿ, ಅದೃಢ ವ್ಯಕ್ತಿತ್ವ ಹೇಗೆ ಕಾರಣವಾದವು ಎನ್ನುವುದನ್ನು ವ್ಯಕ್ತಪಡಿಸುತ್ತಾ ಯಾವೊಬ್ಬ ವ್ಯಕ್ತಿಯ ಕ್ರೂರ ನಡತೆಯ ಹಿಂದೆ ಅದಕ್ಕೆ ಏಷ್ಟೆಲ್ಲಾ ಕಾರಣಗಳು ಕೆಲಸ ಮಾಡುತ್ತವೆ ಎಂಬುದನ್ನು ಮನೋವೈಜ್ಞಾನಿಕನಂತೆ ವ್ಯಾಖ್ಯಾನಿಸಿದ್ದಾರೆ. ಇವುಗಳ ಜೊತೆ ಮಲೆನಾಡಿನ ಪ್ರಕೃತಿ ವರ್ಣನೆ ಎಷ್ಟು ವರ್ಣಿಸಿದ್ದರೂ ಕುವೆಂಪುವಿಗೆ ತೃಪ್ತಿಯಿಲ್ಲ ಎನ್ನುವುದನ್ನು ಕಾಣಬಹುದು.

ಆದರೆ ಇಂತಹ ಸುಂದರ ಪ್ರಕೃತಿಯ ಮಡಿಲಿನಲ್ಲಿ ಬದುಕುತ್ತಿದ್ದ ಮಾನವನ ಬಾಳು ಎಷ್ಟೊಂದು ಸ್ವಾರ್ಥಪರ ಎಷ್ಟು ವಿಕೃತ, ಎಷ್ಟು ಅಸಭ್ಯವಾಗಿತ್ತು ಎಂಬುದನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಹಾಗೆಯೇ ಮಲೆಯ ಜನರ ಬದುಕನ್ನು ಅವರ ರೀತಿ–ನೀತಿಗಳನ್ನು ವರ್ಣಿಸುವಲ್ಲಿ ಆ ಜನರ ಜೀವನದ ಅಸಂಸ್ಕೃತಿಯು ''ಎಷ್ಟು ಸಹಜತೆ, ವಾಸ್ತವತೆಗಳಿಂದ ಕೂಡಿದೆ. ಮಾತೆತ್ತಿದರೆ ಈ ಜನಗಳ ಬಾಯಲ್ಲಿ ಹೊಲಸು ಮಾತು ನಿರರ್ಗಳವಾಗಿ ಹೊರ ಬರುತ್ತವೆ. ಸುಸಂಸ್ಕೃತರ ಸಾಲಿಗೆ ಸೇರುವ

ನಾಗಮ್ಮನವರೂ ಇದಕ್ಕೆ ಹೊರತಲ್ಲ "ನಿನ್ನ ಗುಡಿನಾಶನಾಗ" ಎಂದು ದೇವರನ್ನೇ ಬೈಯ್ಯುವುದು ಮತ್ತು ಸೀತೆಯೂ ಒಮ್ಮೆ"ನಿನ್ನ ಕೃಷ್ಣಪ್ಪ ಗೌಡರನ್ನ ಹುಲಿ ಹಿಡಿಯ" ಎಂದು ಶಪಿಸುವುದು ಇನ್ನೂ ಮೊದಲಾಗಿ ವಾಸ್ತವಿಕತೆಯಿಂದ ಜನಜೀವನವನ್ನು ವರ್ಣಿಸಲ್ಪಟ್ಟಿದ್ದರೂ ವಾಸ್ತವಿಕತೆಯ ಹೆಸರಿನಲ್ಲಿ ಅಶ್ಲೀಲವನ್ನು ಎಲ್ಲೂ ಬಳಸಿಕೊಂಡಿಲ್ಲ. ಸೇರೆಗಾರ ರಂಗಪ್ಪನ ವಿಟ ಜೀವನವನ್ನು ಗಂಗೆಯಂತಹ ಮಾಯಗಾರ್ತಿಯ ಬದುಕನ್ನು ಸೇರೆಗಾರ ರಂಗಪ್ಪ ಸುಬ್ಬಮ್ಮ ಇವನ ಅನೈತಿಕ ಸಂಬಂಧವನ್ನು ವಿವರಿಸುವಾಗಲೂ ಎಲ್ಲೂ ಯಾವ ರೀತಿಯ ಅಶ್ಲೀಲ ಪದಗಳನ್ನಾಗಲಿ ವರ್ಣನೆಯನ್ನಾಗಲಿ ಬಳಸಿಲ್ಲ.

ಕಾನೂರು ಸುಬ್ಬಮ್ಮ ಹೆಗ್ಗಡಿತಿಯಲ್ಲಿ ಇಂಥ ನಾಟಕೀಯತೆ ಸಾಕಷ್ಟು ಇದೆಯೆಂತಲೇ ಅದು ಕೊನೆಯವರೆಗೂ ಓದುಗನ ಲಕ್ಷ್ಯವನ್ನು ಹಿಡಿದುಕೊಂಡಿರಲು ಸಮರ್ಥವಾಗಿದೆ. ಕಾದಂಬರಿಯ ಆರಂಭದಲ್ಲೇ ಗಾಡಿಯಾಳು ನಿಂಗನ ಅಲಕ್ಷದ ಮೂಲಕ ಎತ್ತಿನ ಬಂಡಿಯುರುಳಿ ಹೂವಯ್ಯನ ಬೆನ್ನಿಗೆ ಗಾಯವಾಗುತ್ತದೆ. ಮೈಸೂರಿನಿಂದ ಬೇಸಿಗೆ ರಜಕ್ಕಾಗಿ ಕಾನೂರಿಗೆ ಹೊರಟಿದ್ದ ಹೂವಯ್ಯ, ರಾಮಯ್ಯರು ಈ ಘಟನೆಯಿಂದ ನಡುವೆಯೇ ಮುತ್ತಳ್ಳಿಯಲ್ಲಿ ಉಳಿಯಬೇಕಾಗುತ್ತದೆ. ಹೂವಯ್ಯ, ಸೀತೆ ಪರಸ್ಪರರನ್ನು ಸಾಧಿಸುವುದು ಪರಸ್ಪರ ಹೃದಯ ಭಾವಗಳನ್ನ ಅರಿತುಕೊಳ್ಳುವುದು ಈ ಘಟನೆಯ ಫಲವಾಗಿಯೇ.

ಕಥೆಯ ಬೆಳವಣಿಗೆಗೆ ಸಹಕಾರಿಯಾಗುವ ಅನೇಕ ಘಟನೆಗಳು ಕಾದಂಬರಿಯುದ್ದಕ್ಕೂ ಕಾಣಿಸಿಕೊಳ್ಳುತ್ತದೆ. ಸುಬ್ಬಮ್ಮ ಓಬಯ್ಯನಿಗೆ ಅರ್ಧ ಹರಿದ ನೂರು ರೂಪಾಯಿ ಕೊಟ್ಟಿದ್ದು, ಹೂವಯ್ಯ, ರಾಮಯ್ಯ ಹೂಳಲು ನಿಂತಾಗ ನೇಗಿಲು ಮುರಿದದ್ದು, ಎತ್ತಿಗೆ ಗಾಯವಾದದ್ದು, ಬಲೀಂದ್ರ ಹೋತನನ್ನು ಹೂವಯ್ಯ ಉಳಿಸಿಕೊಂಡದ್ದು, ಸಿಂಗಪ್ಪಗೌಡರ ಮಗ ಕೃಷ್ಣಪ್ಪ ಹುಲಿಗೆ ಬಲಿಯಾದದ್ದು, ಸುಬ್ಬಮ್ಮ ತನ್ನ ಆಭರಣಗಳನ್ನು ಕಾನೂರಿನಿಂದ ಸಾಗಿಸಲು ಪ್ರಯತ್ನಿಸಿದ್ದು, ರಾಮಯ್ಯನ ಮದುವೆಯ ಕಾಲಕ್ಕೆ ಬಣವಿಗೆ ಬೆಂಕಿ ಬಿದ್ದದ್ದು, ಸೀತೆಯ ಕೊರಳಲ್ಲಿ ಜೋಯಿಸರೇ ಮಂಗಳಸೂತ್ರ ಕಟ್ಟಿದ್ದು, ಸುಬ್ಬಮ್ಮ ಮತ್ತು ಗಂಗೆಯರಿಗೆ ಕುಸ್ತಿ ನಡೆದದ್ದು, ಸೀತೆಗೆ ಬರೆ ಬಿದ್ದದ್ದು, ಅಡಕೆ ಮರಗಳ ಸಾರದ ಮೇಲೆ ಸುಬ್ಬಮ್ಮ ಮತ್ತು ಸೆಟ್ಟರು ಸಾಧಿಸಿದ್ದು, ಸುಬ್ಬಮ್ಮ ಗರ್ಭಪಾತ ಮಾಡಿಕೊಂಡಿದ್ದು, ರಾಮಯ್ಯ ವಿಷ ಕುಡಿದು ಸತ್ತದ್ದು– ಇವೇ ಮೊದಲಾದ ನಾಟಕೀಯ ಘಟನೆಗಳಿಂದಾಗಿ ಈ ಕಾದಂಬರಿ ರಸಪೂರ್ಣವೂ ಮನೋಹರವೂ ಆಗಿದೆ. ಪಾತ್ರಗಳು ಜೀವಂತವಾದಷ್ಟೂ ಕಾದಂಬರಿ ಯಶಸ್ವಿಯಾಗುತ್ತದೆ ಎನ್ನುವುದಕ್ಕೆ ಕುವೆಂಪುರವರಿಗೆ ಕಲ್ಪನಾಶಕ್ತಿ ಇರುವಂತೆ ಅದ್ಭುತವಾದ ಚಿತ್ರಣಶಕ್ತಿಯೂ ಇದೆ.

ಕಾದಂಬರಿಯಲ್ಲಿನ ಒಂದೊಂದು ಪಾತ್ರವೂ ಮತ್ತೊಂದು ಪಾತ್ರವನ್ನು ಅನುಕರಿಸಿಲ್ಲ. ಆದ್ದರಿಂದ ಜೀವಂತತೆಯನ್ನು ಕಾಣಬಹುದಾಗಿದೆ. ಕಾದಂಬರಿಯ ಪ್ರಾರಂಭದಲ್ಲೇ ಈ ಶಕ್ತಿಯನ್ನು ನಾವು ಅನುಭವಿಸಬಹುದು. ಹೂವಯ್ಯ ವಾಚಕರಿಗೆ ಪರಿಚಯವಾಗುವ ಚಿತ್ರ, ಓದುವಾಗ ವಾಚಕರ ಒಳಗಣ್ಣಿಗೆ ತೇಜಸ್ವಿಯಾದ ಯುವಕ ಬಂದು ನಿಲ್ಲುತ್ತಾನೆ. "ವೇಗವಾಗಿ ನಡೆಯುತ್ತಲೇ ಕ್ಷಣ ಕ್ಷಣಕ್ಕೂ ಕತ್ತೆತ್ತಿ ಸುತ್ತಲೂ ಬಯಕೆ ನೋಟವನ್ನಟ್ಟಿ ಸಂತೋಷ ಪಡುವಂತೆ ತೋರುತ್ತಿತ್ತು"[೧] ಎಂಬ ವಾಕ್ಯವನ್ನು ಓದಿದಾಗ ಆತ ನಿಸರ್ಗ ಸೌಂದರ್ಯಪ್ರೇಮಿ, ಆತನದು ಕವಿ ಹೃದಯ ಎಂಬುದರ ಅರಿವಾಗುತ್ತದೆ. ಹೂವಯ್ಯ ಎಷ್ಟು ಬಲಶಾಲಿಯೋ ಅಷ್ಟೇ ಕೋಮಲ ಜೀವಿ. ಟ್ರಂಕಿನ ಸಾಧಾರಣ ತಿವಿತದಿಂದಲೂ ಆತ ನರಳುತ್ತಾರೆ.

---

೧. ಕಾನೂರು ಹೆಗ್ಗಡಿತಿ – ಕುವೆಂಪು, ಪುಟ ೧-೩

ತುಂಗಾನದಿಯ ರಾಮತೀರ್ಥದ ಬಳಿಯ ಅಕ್ಕಪಕ್ಕದಲ್ಲಿ ನಿಂತ ಪರ್ವತಗಳ ಸಾಲು ಮರಗಳು, ನದಿಯಲ್ಲಿ ಮುಳುಗಿದ್ದ ಹೆಬ್ಬಂಡೆಗಳು, ಬಂಡೆಯಿಂದ ಬಂಡೆಗೆ ಧುಮುಕುವ ಜಲರಾಶಿಯ ನರ್ತನ ಇವೆಲ್ಲವುಗಳನ್ನು ಓದಿ ಭಾವ ಸಮಾಧಿಯಲ್ಲಿ ಮುಳುಗುತ್ತಾನೆ. ಕಣ್ಣೀರು ಸುರಿಸುತ್ತಾನೆ. ಅಸಾಮಾನ್ಯ ವ್ಯಕ್ತಿಯಂತೆ ಕಾಣಿಸಿದರೂ ಸಾಮಾನ್ಯ ವ್ಯಕ್ತಿಗಳ ಮಾನವ ಸಹಜ ಭಾವ ರಂಗಗಳು ಹೂವಯ್ಯನನ್ನು ಬಿಟ್ಟಿರುವುದಿಲ್ಲ. ಸ್ತ್ರೀಯರ ಮೇಲೆ ಕೈಯೆತ್ತಬಾರದೆಂಬುದು ಸರ್ವಸಾಮಾನ್ಯ ಲಕ್ಷಣವಾಗಿದೆ. ಆದರೆ ಹೂವಯ್ಯ ಉದಾತ್ತ ವ್ಯಕ್ತಿಯಾಗಿದ್ದರೂ ಮಾನವ ಸಹಜ ತಪ್ಪುಗಳನ್ನು ಲೇಖಕರು ಮಾಡಿಸಿದ್ದಾರೆ. ಗಾಡಿವಿಂಗನ ಮಗ ಪುಟ್ಟನ ಕೊಲೆಯ ವಾರ್ತೆಯನ್ನು ಕೇಳಿ ಕಾನೂರಿಗೆ ಹೋಗಿದ್ದಾಗ ಗಂಗೆಯನ್ನು ಹೂವಯ್ಯ ಬೆತ್ತದಿಂದ ಹೊಡೆಯುತ್ತಾನೆ. ಈ ದೋಷಗಳಿಂದಲೇ ಹೂವಯ್ಯ ಕಾದಂಬರಿಯಲ್ಲಿ ಜೀವಂತವಾಗಿ ಕಾಣುತ್ತಾನೆ. ಈ ದೋಷ ನಿವಾರಣೆಗೆ ಹೆಚ್ಚು ಅಂತರ್ಮುಖಿಯಾಗುತ್ತಾನೆ.

ಸುಬ್ಬಮ್ಮ, ರಾಮಯ್ಯ ಇವರ ದುರಂತ ಮರಣಗಳಿಂದ ಹೂವಯ್ಯನ ದೃಢತೆ ಬಲಿಯುತ್ತದೆ. ತಪಸ್ವಿಯಾಗಿ ಕರ್ಮಯೋಗಿಯಾಗಿ ಮಲೆನಾಡವರ ಜೀವನವನ್ನು ಸುಧಾರಿಸಲು ದುಡಿಯುತ್ತಾನೆ. ಆತ ಅವಿವಾಹಿತನಾಗಿಯೆ ಉಳಿಯುವುದು ಧ್ಯೇಯವಾದದ ಅತಿಶಯತೆ, ಅವಾಸ್ತವಿಕ, ಅಸಹಜ ಎಂದು ಕೆಲವರಿಗೆನ್ನಿಸಬಹುದು. ಆದರೆ ಮೊದಲಿನಿಂದಲೂ ಆತನ ವ್ಯಕ್ತಿತ್ವದ ಬೆಳವಣಿಗೆಯನ್ನು ಸೂಕ್ಷ್ಮವಾಗಿ ನಿರೀಕ್ಷಿಸುತ್ತ ಬಂದವರಿಗೆ ಹಾಗೇನೂ ಎನ್ನಿಸಲಾರದು. ಜನಸೇವೆಗಾಗಿ ತಮ್ಮ ಆಯುಷ್ಯವನ್ನೆಲ್ಲ ಮೀಸಲಾಗಿಟ್ಟು ಕೊನೆಯವರೆಗೂ ಅವಿವಾಹಿತನಾಗಿಯೆ ಉಳಿದ ಪುಣ್ಯಜೀವಿಗಳೆಷ್ಟೋ ಜನ ಆಗಿ ಹೋಗಿದ್ದಾರೆ. ಅಂಥ ಆದರ್ಶ ವ್ಯಕ್ತಿಗಳ ಸಾಲಿನಲ್ಲಿ ಹೂವಯ್ಯ ನಿಲ್ಲುತ್ತಾನೆ.

ಹೂವಯ್ಯ ಎಂಥ ಭವ್ಯ ವ್ಯಕ್ತಿಯಾಗಿದ್ದ ಎಂದರೆ ಕಾದಂಬರಿಯ ಪ್ರಾರಂಭದಲ್ಲಿ ಹೂವಯ್ಯನ ಬಗ್ಗೆ ಕಾದಂಬರಿಕಾರರು ಹೇಳಿರುವ ಈ ಮಾತು ಕಡಿಮೆಯೇನೋ ಎನಿಸುತ್ತದೆ. ಆತನ ಪರಿಚಯ ಪಡೆಯುತ್ತಾ ಹೋದಂತೆಲ್ಲಾ ಉಪನಿಷತ್ತು, ಭಗವದ್ಗೀತೆ ಮುಂತಾದ ಗ್ರಂಥಗಳ ಜ್ಞಾನವನ್ನು ಚಿಕ್ಕ ವಯಸ್ಸಿನಲ್ಲೇ ಸಂಪಾದಿಸಿದ್ದ ಆತ ವೆಂಕಪ್ಪಯ್ಯ ಜೋಯಿಸರಿಗೆ ನಿರ್ಭಯವಾಗಿ ಟೀಕಿಸಿ, ಹಾಸ್ಯ ಮಾಡುತ್ತಾನೆ. ಆದರೆ ಆ ಟೀಕೆಯಲ್ಲಿ ತಪ್ಪನ್ನು ತಿದ್ದುವ ಗುರುವಿನ ಗುಣವಿದೆಯೇ ಹೊರತು ವೈಯಕ್ತಿಕ ಅಗೌರವವಿಲ್ಲ, "ಕರುಣೆ ಮೂಕಪ್ರಾಣಿಯ ಬಲಿದಾನಕ್ಕಿಂತಲೂ ಹೆಚ್ಚಿನ ಪೂಜೆ" ಎನ್ನುವ ಹೂವಯ್ಯ ಹರಕೆಯ ಹೋತವನ್ನು ರಕ್ಷಿಸುಲ್ಲಿ ಯಾರನ್ನೂ ಲೆಕ್ಕಿಸುವುದಿಲ್ಲ. ಜಗತ್ತಿನ ಎಲ್ಲ ವ್ಯಕ್ತಿಗಳ ಬಗ್ಗೆ ಪ್ರೇಮ, ಸಮಾಜದ ಏಳಿಗೆಯಲ್ಲಿ ಆಸಕ್ತಿ ಇರುವ ವ್ಯಕ್ತಿ, ದ್ವೇಷ, ಅಸೂಯೆಗಳ ಬಿರುಮಳೆ ಸುರಿಸಿದ ಚಂದ್ರಯ್ಯಗೌಡರಲ್ಲಿಯೂ ಆತನಿಗೆ ದ್ವೇಷವಿಲ್ಲ.

ಪ್ರಕೃತಿ ಸೌಂದರ್ಯವನ್ನು ಆನಂದಿಸುವಲ್ಲಿ ಭಾವಸಮಾಧಿಯನ್ನು ಸೇರುವ ಹೂವಯ್ಯನ ಆಧ್ಯಾತ್ಮಿಕತೆ ಉನ್ನತಮಟ್ಟದ್ದು ಅಷ್ಟೇ ಉದಾತ್ತವಾದುದು. ಸೀತೆಯ ಬಗ್ಗೆ ಇರುವ ಆತನ ಪ್ರೇಮವು ಅಷ್ಟೇ. ಸಕಲ ಗುಣಗಳನ್ನೂ ಹೂವಯ್ಯನಿಗೆ ಆರೋಪಿಸಿದ್ದರೂ ಆತ ಹುಟ್ಟು ಮಹಾತ್ಮನಲ್ಲ. ತನ್ನ ಪ್ರಯತ್ನದಿಂದ ಆತ ಹೇಗೆ ನಿಧಾನವಾಗಿ ಆ ಪದವನ್ನೇರಿದ ಎಂಬುದನ್ನು ಸಮಂಜಸ ರೀತಿಯಲ್ಲಿ ಚಿತ್ರಿಸಿ ಹೂವಯ್ಯನನ್ನು ಸರ್ವವಂದ್ಯನನ್ನಾಗಿ ಮಾಡಿದ್ದಾರೆ. ಸೀತೆಯ ಪ್ರೇಮ ಪ್ರಸಂಗದಲ್ಲಿ ಅವನಿಗುಂಟಾದ ನಿರಾಸೆ ಅತಿ

ದುಃಖಕರವಾದುದು. ಹೂವಯ್ಯನ ಜೀವನದಲ್ಲೂ ಕುಂದುಕೊರತೆಗಳೇ ಇಲ್ಲದ ಅತಿ ಮಾನವನಲ್ಲ. ಅವನ ಮನಸ್ಸಿನಲ್ಲೂ ಯೋಚನೆಗಳು ಬರುವುದುಂಟು. ಆದರೆ ತಕ್ಷಣ ಮನಸ್ಸಿನಿಂದ ಪರಿಹರಿಸಿ ಮನಸ್ಸನ್ನೆ ಸ್ವಚ್ಛ ಮಾಡಿಕೊಂಡು ಪುಟವಿಟ್ಟ ಚಿನ್ನವಾಗುತ್ತಾನೆ. ಹೂವಯ್ಯನ ಮೂಲಕ ಮಲೆನಾಡಿನ ಬದುಕಿನ ಅಂಧಕಾರವನ್ನು ಹೋಗಲಾಡಿಸಿ ನವಜ್ಯೋತಿಯನ್ನು ಬೆಳಗಿಸಿದವನು. ಕಾದಂಬರಿಯ ಕೊನೆಯ ಅಧ್ಯಾಯ "ಹತ್ತು ವರ್ಷಗಳ ನಂತರ"ದಲ್ಲಿ ವ್ಯಕ್ತಪಡಿಸಿದ್ದಾರೆ.

ರಾಮಯ್ಯನವರು ತದ್ವಿರುದ್ಧವಾದ ಪ್ರಕೃತಿ. ಹೂವಯ್ಯನಂಥ ದೃಢ ಮನಸ್ಸು ದಕ್ಷತೆ, ಅಂತರ್ಮುಖತೆ, ಆಧ್ಯಾತ್ಮಿಕತೆ ಆತನಲ್ಲಿಲ್ಲ, ಕೋಮಲವೂ ಚಂಚಲವೂ ಆದ ಚಿತ್ತ ಅವನದು. ತಂದೆಯ ಬಗೆಗೆ ಮೊದಲಿನಿಂದಲೂ ಭಯವಿದ್ದಿತಾದುದರಿಂದ ಆತ ಹೆದರೆದೆಯವನೂ ಆಗಿದ್ದ. ತನ್ನಲ್ಲಿಲ್ಲದ ಮನೋಸ್ಥೈರ್ಯ, ದೃಢಚಿತ್ತತೆ ಹೂವಯ್ಯನಲ್ಲಿದ್ದುದರಿಂದ ಆತನನ್ನು ಆದರ್ಶಮೂರ್ತಿಯೆಂದು ಆರಾಧಿಸುತ್ತಿದ್ದ. ಆದರೆ ಸೀತೆಯ ಮೋಹಕ್ಕೆ ಕಟ್ಟುಬಿದ್ದು ಅಸೂಯೆ ಆವರಿಸಿ ಹೂವಯ್ಯನಿಂದ ದೂರವಾಗುತ್ತಾನೆ. ಸೀತೆಯೊಡನೆ ಮದುವೆಯಾದ. ಹಾಗಾದರೂ ಆಕೆ ತನಗೆ ಲಭಿಸದಂತೆ ಆದಾಗ ಜೀವನದಲ್ಲಿ ನಿರಾಸೆಯೂ ಜಿಗುಪ್ಸೆಯೂ ಉಂಟಾಗುತ್ತದೆ, ಮನೋವಿಕಾರಕ್ಕೊಳಗಾಗುತ್ತಾನೆ. ಸುಬ್ಬಮ್ಮನ ಘೋರ ಮರಣವನ್ನು ಕಣ್ಣಾರೆ ಕಂಡಾಗ ಬದುಕು ಹೇಯವೆನಿಸಿ ವಿಷ ಕುಡಿದು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಕಾದಂಬರಿಯ ಆರಂಭದಿಂದಲೂ ಆತನ ಪಾತ್ರವನ್ನು ದುರಂತದ ಕಪ್ಪು ಛಾಯೆ ಆವರಿಸಿಕೊಂಡಂತೆ ಭಾಸವಾಗುತ್ತದೆ. ಆತನ ಪ್ರಕೃತಿಗೆ ಸಹಜ ರೀತಿಯಲ್ಲಿ ಆತನ ಕೊನೆಯಾಗಿರುವುದನ್ನು ಕಾಣಬಹುದಾಗಿದೆ.

ಸುತ್ತಮುತ್ತಲ ಹಳ್ಳಿಗಳಲ್ಲೆಲ್ಲಾ ಕ್ರೌರ್ಯಕ್ಕೆ, ನಿರಂಕುಶ ದರ್ಪಕ್ಕೆ ಹೆಸರಾದಂತ ಕಾದಂಬರಿಯ ದುರ್ಘಟನೆಗಳಿಗೆ ಸೂತ್ರಧಾರಿಯಾದ ಪ್ರಚಂಡ ವ್ಯಕ್ತಿ ಚಂದ್ರಯ್ಯಗೌಡರು. ತಾವು ಮುದುಕರಾಗಿದ್ದರೂ ತಮ್ಮ ಮಕ್ಕಳೇ ಮದುವೆಯ ವಯಸ್ಸಿಗೆ ಬಂದಿದ್ದರೂ ತಮ್ಮ ಧನಮದದಿಂದ, ಶರೀರ ಚಾಪಲ್ಯದಿಂದ ಇಳಿವಯಸ್ಸಿನಲ್ಲಿ ಬಡಹುಡುಗಿ ಎಳೆಯ ಸುಬ್ಬಮ್ಮನನ್ನು ಕೈಹಿಡಿದು ಕಾನೂರಿನ ದುರಂತಕ್ಕೆ ನಾಂದಿ ಹಾಡುತ್ತಾರೆ. ಸಮಾಜದ ದೃಷ್ಟಿಯಿಂದ ತಪ್ಪಿತಸ್ಥರಲ್ಲದಿದ್ದರೂ ಅವರ ಅಂತರಂಗದಲ್ಲಿ ಅವರು ಮಾಡಿದ ತಪ್ಪಿಗೆ ಶಿಕ್ಷೆ ವಿಧಿಸುತ್ತಲೇ ಇರುತ್ತದೆ.

"ಎಳೆಯದೆಂದಿಗೂ ಹಳೆಯದನ್ನು ಒಲಿಯಲಾರದು, ಬಾಲ್ಯ ವೃದ್ಧಾಪ್ಯಗಳಿಗೆ ಗೌರವದ ಸಂಬಂಧವಿರಬಲ್ಲುದೆ ಹೊರತು ಪ್ರೇಮ ಸಂಬಂಧವಿರಲಾರದು"[೧] ಮಾತ್ಸರ್ಯದಿಂದ ತುಂಬಿದ ಗೌಡರ ಮನಸ್ಸು ಸೇರೆಗಾರ ರಂಗಪ್ಪ ಶೆಟ್ಟಿಯನ್ನು ಶಂಕಿಸುತ್ತದೆ. ತಮ್ಮ ತರುಣ ಪತ್ನಿಯ ಪರವಾಗಿ ಕ್ರೂರವರ್ತನೆ ಆರಂಭವಾಗುತ್ತದೆ. ಹೂವಯ್ಯನ ಸುಸಂಸ್ಕೃತ ನುಡಿಗಳಿಂದ ಸಹಜವಾಗಿ ಪ್ರಭಾವಿತಳಾಗಿ ತಾನೂ ನಯಶೀಲೆಯಾಗಲು ಸಹಜವಾಗಿ ಪ್ರಯತ್ನಿಸಿದ ಸುಬ್ಬಮ್ಮನ ವರ್ತನೆಯಲ್ಲೂ ಗೌಡರ ಸಂಶಯವಿದೆ. ದೃಷ್ಟಿ ಪಾಪವನ್ನೇ ಅರಸುತ್ತದೆ. ಮನೆಯಲ್ಲಿ ಉಂಟಾದ ನೂತನ ಮೈತ್ರಿ ಅವರ ದೃಷ್ಟಿಯಲ್ಲಿ ಪಿತೂರಿಯಂತೆ ತೋರಿ ಹುಚ್ಚಾಗಿ ವರ್ತಿಸುತ್ತಾರೆ. ಜೊತೆಗೆ ಬೆಂಕಿಗೆ ತುಪ್ಪ ಸುರಿಸುವ ಸೇರೆಗಾರ ರಂಗಪ್ಪನ ಹಿತೋಪದೇಶ ಹೂವಯ್ಯನನ್ನ ಹೊರ ಹಾಕುತ್ತಾರೆ. ನಂತರ ಆಸ್ತಿವಿಭಾಗದಲ್ಲಿ ಅದರ ನಂತರ ಗೌಡರು ಹೂವಯ್ಯನ ಬಗ್ಗೆ ತೋರುವ ಸಣ್ಣತನ ಅಸಹ್ಯಪಟ್ಟುಕೊಳ್ಳುವಂತಹುದು. ಇನ್ನು ರಾಕ್ಷಸ ಕ್ರೌರ್ಯದ ಪರಮಾವಧಿ

---

೧. ಕಾನೂರು ಹೆಗ್ಗಡಿತಿ – ಕುವೆಂಪು

ಕಂಡುಬರುವುದು. ಮನೋರೋಗ ಪೀಡಿತೆಯಾದ ಸೀತೆಗೆ ಬರೆ ಹಾಕುವಾಗ ಅವರು ಸೀತೆಗೆ ಎಳೆಯುವ ಒಂದೊಂದು ಬರೆಯೂ ಓದುಗರ ಎದೆ ಹೆಪ್ಪುಗಟ್ಟಿಸುತ್ತದೆ. ಇಷ್ಟೊಂದು ಕ್ರೂರ ಬರ್ಬರ ವ್ಯಕ್ತಿಯ ಅಂತ್ಯ ಮಾತ್ರ ಯಾರಿಗೂ ಕಣ್ಣೀರು ತರಿಸುವಂತಹದು. ಆ ದರ್ಪದ ಪ್ರತಿಮೂರ್ತಿ ಚಂದ್ರಯ್ಯಗೌಡರೆಲ್ಲಿ, ಈ ಹಾಸಿಗೆಯ ಮೇಲೆ ಸುರುಟಿ ಹೋಗಿರುವ ಕನಿಕರ ವ್ಯಕ್ತಿಯೆಲ್ಲಿ ಕಡೆಗೆ ಹೂವಯ್ಯ ಬಂದಾಗ ತಮ್ಮ ಕೈಯನ್ನು ಹೂವಯ್ಯನ ಕಡೆಗೆ ಪ್ರೀತಿಯ ದುಃಖದ ಪಶ್ಚಾತ್ತಾಪದ ಕ್ಷಮಾಪಣೆಯ ಗೌರವ, ಪ್ರಾರ್ಥನೆಯ ಕಾಲುವೆಯೇ ಹರಿಯುವಂತೆ ಸಪ್ರಯತ್ನವಾಗಿ ನೀಡಿದರು ಎನ್ನುವಾಗ ದುಷ್ಟಶಕ್ತಿ ಸತ್‌ಶಕ್ತಿಯ ಮುಂದೆ ಸೋಲಬೇಕಾಗುತ್ತದೆ ಎನ್ನುವುದನ್ನು ಕಾದಂಬರಿಕಾರರು ಪ್ರತಿಪಾದಿಸಿದ್ದಾರೆ. ಹೀಗೆ ಚಂದ್ರಯ್ಯಗೌಡರು ತಮ್ಮ ಕ್ರೌರ್ಯ, ದರ್ಪ, ಐಶ್ವರ್ಯ ಮುಂತಾದವುಗಳಿಂದ ಸುತ್ತಣ ಜನಗಳ ಮೇಲೆ ಪ್ರಭಾವ ಬೀರಿದ್ದರು. ಅವರು ಸತ್ತರೂ ಅವರ ಕೀರ್ತಿ ಸಾಯುವುದಿಲ್ಲ ಅದ್ಭುತ ವ್ಯಕ್ತಿತ್ವವನ್ನು ಕುವೆಂಪು ಅದ್ಭುತವಾಗಿ ಚಿತ್ರಿಸಿದ್ದಾರೆ.

ಸುಬ್ಬಮ್ಮನದೂ ಅದೇ ಬಗೆಯ ದುರಂತ ವ್ಯಕ್ತಿತ್ವ. ನೆಲ್ಲುಹಳ್ಳಿಯ ಜನರಿಂದ ಸುಬ್ಬಿ ಎಂದು ಕರೆಸಿಕೊಂಡು ತುಂಬ ಬಡತನದಿಂದ ಬಂದ ತರುಣಿ ವಿವಾಹ ಮಹೋತ್ಸವದಲ್ಲಿ ಹೂವಯ್ಯನನ್ನು ನೋಡಿ ಹಗಲುಗನಸು ಕಂಡವಳು. ಚಂದ್ರಯ್ಯಗೌಡರು ಹೆಣ್ಣು ಕೇಳಲು ಬಂದಾಗ ಹೂವಯ್ಯನಿಗೆ ಇರಬೇಕೆಂದು ಸಂತೋಷಪಡಲು ಕೊನೆಗೆ ಗೌಡರಿಗೆ ಎಂದಾಗ ಅಷ್ಟೇನೂ ವ್ಯಸನಪಡಲಿಲ್ಲ ಕಾರಣ ಕಾನೂರಿನಂಥ ದೊಡ್ಡ ಮನೆಗೆ ಯಜಮಾನರಾಗಿ ಚಂದ್ರಯ್ಯಗೌಡರ ಕೈಹಿಡಿಯುವುದು ಹೆಗ್ಗಡಿತಿಯಾಗುವುದು ಸುಕೃತವೆಂದು ಭಾವಿಸಿದಳು.

ದಾರಿದ್ರ್ಯದಲ್ಲಿ ಹುಟ್ಟಿ ಬೆಳೆದು ಅಸಂಸ್ಕೃತರಿಂದ ಪೋಷಿತಳಾದ ಸುಬ್ಬಮ್ಮನ ನಡೆನುಡಿ, ಆಚಾರ ವಿಚಾರ ಶೀಲಗಳು, ಸುಸಂಸ್ಕೃತ ಸಹಜವಾದ ಔದಾರ್ಯ, ಗಂಭೀರ್ಯ, ನಯವಿನಯ, ಸೌಜನ್ಯಗಳು ಒಂದಿಷ್ಟು ಇರಲಿಲ್ಲ, ಆದಕಾರಣ ಅವಕಾಶ ಸಿಗದೆ ಸುಪ್ತವಾಗಿದ್ದ ಅಹಂಕಾರ, ಛಲ, ಧರ್ಪ, ಸ್ವಾರ್ಥಪರತೆ ದುರಭಿಮಾನ ಮುಂತಾದ ಕಡುಭಾವಗಳಿದ್ದವು. ಆದರೂ ಹೂವಯ್ಯನ ನಡತೆಯನ್ನು ನೋಡಿ ನಯಶೀಲಳಾಗುತ್ತಾಳೆ. ಅವಳದು ದೊಡ್ಡತನ, ಅಸಂಸ್ಕೃತೆಯಾದರೂ ಹಳ್ಳಿಗರಿಗೆ ಸಹಜವಾದ ಮುಗ್ಧತೆ ಪರಿಶುದ್ಧತೆಯಿದೆ. ಸಂಶಯಪಟ್ಟ ಗಂಡನಿಂದ ಹಿಂಸೆಗೆ ಒಳಗಾಗಿ ತವರು ಮನೆಯ ಸಹವಾಸ, ಗಂಡನ ಮನೆಗೆ ಹೋಗಿ ಬಾಳಬೇಕೆಂಬ ಆಕಾಂಕ್ಷೆ, ತವರಿನಲ್ಲಿ ಸುಖವಿಲ್ಲ ಆದರವೂ ಇಲ್ಲ, ಗಂಡನ ಮನೆಗೆ ಹೋಗಲು ಅಭಿಮಾನ ಅಡ್ಡ ಬರುವುದು, ಗಂಡನು ಕಾಯಿಲೆಯಿಂದ ಕೃಶವಾದಾಗ ಕರೆಸಿಕೊಳ್ಳುತ್ತಾನೆ. ಆ ವೇಳೆಗೆ ನೋವಿನ ಹಾಗೂ ನಿರೀಕ್ಷೆಯ ತಪಸ್ಸಿನಿಂದ ಅವಳಲ್ಲಿ ಅಧಿಕಾರದ ಗಾಂಭೀರ್ಯ ಬಂದಿರುತ್ತದೆ. ಗೌಡರು ಸತ್ತ ಬಳಿಕ ಹೆಗ್ಗಡಿತಿಯಾಗಿ ಅಧಿಕಾರ ನಡೆಸುತ್ತಾಳೆ. ದರ್ಪ, ಕೀರ್ತಿ ಗಳಿಸುತ್ತಾಳೆ. ಅಧಿಕಾರ ಮದದೊಡನೆ ಯೌವನದ ಮದ ಸೇರಿ ಗೌಡರಿರುವರೆಗೆ ಸುಪ್ತವಾಗಿದ್ದ ಅವಳ ಕಾಮಭಾವ ಅವರು ಸತ್ತ ಬಳಿಕ ಸೇರೆಗಾರರನ್ನು ಅಡಿಕೆ ಮರಗಳ ಸೇತುವೆಯ ಮೇಲೆ ಸಾಧಿಸಿದಾಗ ಜಾಗೃತವಾಗುತ್ತದೆ. ಸಹಜವಾಗಿ ಅವನಿಗೆ ಒಲಿಯುತ್ತಾಳೆ. ಗರ್ಭಿಣಿಯಾಗುತ್ತಾಳೆ. ಅದನ್ನಿಳಿಸಿಕೊಳ್ಳಲೆಂದು ಗಂಗೆಯ ಸಹಾಯ ಕೋರಿ ತನ್ನ ಒಡವೆಗಳನ್ನೆಲ್ಲ ಆಕೆಗೆ ಕೊಡುತ್ತಾಳೆ. ಅವುಗಳನ್ನೆಲ್ಲ ಹೊತ್ತುಕೊಂಡು ಗಂಗೆ ಸೇರೆಗಾರರೊಡನೆ ಪರಾರಿಯಾದ ಬಳಿಕ ಮೋಸ ಹೋಗಿ ಸುಬ್ಬಮ್ಮ ದಿಕ್ಕುಗಾಣದೆ ಮದ್ದು ತೆಗೆದುಕೊಳ್ಳುವ ರೀತಿ ಗೊತ್ತಿರದಿದ್ದರೂ ತೆಗೆದುಕೊಂಡು ಘೋರ ಮೃತ್ಯುವಿಗೆ ಬಲಿಯಾಗುತ್ತಾಳೆ.

ಸುಬ್ಬಮ್ಮನಂಥ ದುರಂತ ನಾಯಿಕೆ ಮತ್ತೊಬ್ಬಳಿಲ್ಲ. ಸುಖ ಅವಳಿಗೆ ಕೊನೆಗೂ ದೊರೆಯಲಿಲ್ಲ. ಸಾಯುವವರೆಗೂ ಕಣ್ಣೀರಿನ ಕಡಲಿನಲ್ಲಿ ತೇಲುವ ಸುಬ್ಬಮ್ಮ ಕಡು ಬಡತನದ ಸ್ತ್ರೀಯರ ಪ್ರತಿನಿಧಿಯಾಗಿ ನಿಲ್ಲುತ್ತಾಳೆ.

ಇನ್ನೂ ಕಾದಂಬರಿಯಲ್ಲಿ ಬರುವ ನಾಗಮ್ಮ, ಗೌರಮ್ಮ, ಶಾಮಯ್ಯಗೌಡರು, ಕೃಷ್ಣಪ್ಪ, ಚಿನ್ನಯ್ಯ, ಪುಟ್ಟಮ್ಮ, ಸೇರೆಗಾರರು, ಗಂಗೆ ಮುಂತಾದ ಎಲ್ಲರೂ ತಂತಮ್ಮ ಸಂಸ್ಕಾರಗಳಿಗೆ ಅನುರೂಪವಾಗಿ ವರ್ತಿಸಿ ಸಮಾಜದಲ್ಲಿ ಕಾಣುವ ದುಷ್ಟ ಶಿಷ್ಟ ಶಕ್ತಿಗಳ ಪ್ರತಿನಿಧಿಗಳಂತೆ ಕಾಣಸಿಗುತ್ತಾರೆ.

ಚಂದ್ರಯ್ಯಗೌಡರು, ರಾಮಯ್ಯ, ಸುಬ್ಬಮ್ಮ ಮೊದಲಾದವರು ದುರಂತದತ್ತ ಸಾಗಲು ವಿಧಿ, ಅಜ್ಞಾನ, ಅಸೂಯೆ, ಅಸಂಸ್ಕೃತಿ, ಅದೃಢ ವ್ಯಕ್ತಿತ್ವ ಹೀಗೆ ಕಾರಣವಾಗಿದೆ ಎನ್ನುವುದನ್ನು ಅಭಿವ್ಯಕ್ತಿಸಿದ್ದಾರೆ. ಮಲೆನಾಡಿನ ವರ್ಣನೆಯು ಅದ್ಭುತವಾದ ಚಿತ್ರಣ ಸಿಗುತ್ತದೆ. ಸುಂದರ ಪ್ರಕೃತಿಯ ಮಡಲಿನಲ್ಲಿ ಬದುಕುತ್ತಿದ್ದ ಮಾನವನ ಬಾಳು ಎಷ್ಟೊಂದು ಸ್ವಾರ್ಥಪರ ಎಷ್ಟು ವಿಕೃತ, ಎಷ್ಟು... ಅಸಭ್ಯವಾಗಿತ್ತು ? ಎಂಬುದನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ವಾಸ್ತವಿಕತೆಯಿಂದ ಜನಜೀವನವನ್ನು ವರ್ಣಿಸಲ್ಪಟ್ಟಿದ್ದರೂ ವಾಸ್ತವಿಕತೆಯ ಹೆಸರಿನಲ್ಲಿ ಅಶ್ಲೀಲವನ್ನು ಎಲ್ಲೂ ಬಳಸಿಕೊಂಡಿಲ್ಲ.

ಮಲೆನಾಡಿನ ಜನರ ಬದುಕು ಮೌಢ್ಯ, ಅಜ್ಞಾನ, ಅಸಂಸ್ಕೃತಿಯ ಸ್ವಾರ್ಥ ಮುಂತಾದವುಗಳಿಗೆ ಸಿಲುಕಿ ವಿಕೃತವಾಗಿದ್ದರೆ, ಅವರ ಬದುಕಿನ ಬಹುಭಾಗವನ್ನು ಕರಾಳಗೊಳಿಸಿರುವ ಇನ್ನೊಂದು ರಾಹು ಕಳ್ಳು ಹಾಗೂ ಮಾಂಸಗಳ ಚಾಪಲ್ಯ. ಬೇಲರಾಳುಗಳಿಂದ ಹಿಡಿದು ಚಂದ್ರಯ್ಯಗೌಡ, ಸಿಂಗಪ್ಪಗೌಡ, ಹಿರಿಯ ವ್ಯಕ್ತಿಗಳು, ಸ್ತ್ರೀಯರಾದ ಸುಬ್ಬಮ್ಮ, ನಾಗಮ್ಮನವರೂ ಇದಕ್ಕೆ ಹೊರತಲ್ಲ. ದೇವರ ಹೆದರಿಕೆಯೂ ಅವರುಗಳ ಹೆಂಡದ ಚಾಪಲ್ಯವನ್ನು ವಿರೋಧಿಸಲು ಅಸಮರ್ಥರಾಗಿದ್ದರು.

ನಾಗಮ್ಮನವರು ಮಗನ ಸದ್ಗುಣಗಳಿಂದ ಪ್ರೇರಿತರಾಗಿ ಮಗನಿಗೆ ಹಿತವಾಗುವಂತೆಯೇ ಸನ್ಮಾರ್ಗದಲ್ಲಿ ಬಾಳಬೇಕೆಂದು ಬಯಸಿ ಎಲ್ಲಾ ಪ್ರಯತ್ನ ಮಾಡಿದರೂ ಕುಡಿತದ ಚಟ ಬಿಡಲಾರದೇ ಹದಿನೈದು ದಿನಗಳಿಗೊಮ್ಮೆ ಗುಟ್ಟಾಗಿ ಕುಡಿಯುತ್ತಿದ್ದರು. ಚಂದ್ರಯ್ಯಗೌಡರು ಕತ್ತಲಲ್ಲಿ ಏನೋ ಆಕೃತಿಯನ್ನು ಕಂಡು ಭೂತವೆಂದು ಕುಸಿದು ಬೀಳುವುದು, ಬೈರನ ಮಗ ಸತ್ತದ್ದಕ್ಕೆ ಹೂವಯ್ಯ ಭೂತರಾಯನ ಹರಕೆ ಹೋತವನ್ನು ಇಟ್ಟುಕೊಂಡಿರುವುದು ಕಾರಣ, ಅವರ ಕಾಯಿಲೆಗೆ ಭೂತರಾಯನ ಚೇಷ್ಟೆಯೇ, ಸೀತೆಯ ಮನೋವಿಕಾರಕ್ಕೆ ಕೃಷ್ಣಪ್ಪನ ದೆಯ್ಯ ಮೈಮೇಲೆ ಬಂದಿದೆ ಎಂದು ನಂಬುವುದು, ಭೂತಪ್ರೇತಗಳ ನಂಬಿಕೆ ಬಿಡಲಾರದ ನಾಗಮ್ಮ, ಹಳ್ಳಿಗರ ಮೌಢ್ಯವನ್ನು ಮೂಲ ಧನವಾಗಿ ಮಾಡಿಕೊಂಡು ಸ್ವಾರ್ಥಸಾಧನೆ ಮಾಡುತ್ತಾ "ಶೂದ್ರ ಮಕ್ಕಳಿಗೆಲ್ಲಾ ಭಗವದ್ಗೀತೆ ಗಂಧವಾದುದೂ ಗೊತ್ತಾಗುತ್ತದೆಯೇ ? ಅದನ್ನೆಲ್ಲಾ ಓದಿ ಮನೆ ಹಾಳು ಮಾಡಿಕೊಳ್ಳುತ್ತಾರೆ ಎನ್ನುವ ವೆಂಕಪ್ಪಯ್ಯನವರು, ಈ ಎಲ್ಲಾ ಮೌಢ್ಯ ಪ್ರವೃತ್ತಿಗಳಿಂದ ಪ್ರೇರಿತರಾದ ಜನರನೇಕರು ನಿಷ್ಠುರವಾಗಿ ವರ್ತಿಸುತ್ತಾರೆ. ಅವರ ಸ್ವಾರ್ಥಪರ ಒಣಜಂಭದಿಂದ ಕೂಡಿದ ಪ್ರವರ್ತನೆ ಕತೆಯನ್ನು ದುರಂತದ ಪ್ರಪಾತಕ್ಕೆ ತಳ್ಳುತ್ತವೆ. ಚಂದ್ರಯ್ಯಗೌಡರ ಮನಸ್ಸಿಗೆ ಒಮ್ಮೆಗಾದರೂ ಹೂವಯ್ಯನೂ ತನ್ನ ಮಗನಂತೆಯೇ ಎಂದು ತಿಳಿದುಕೊಳ್ಳುವಷ್ಟು ಸಂಸ್ಕಾರವಿದ್ದಿದ್ದರೆ ಆಗ ಕತೆಯ

ಓಟವೇ ಬೇರೆಯಾಗುತ್ತಿತ್ತು, ಎಲ್ಲಾ ಮಂಗಳಕರವಾಗಿ ಕಾನೂರಿನ ಮನೆ ಸುಖದ ಬೀಡಾಗಬಹುದಿತ್ತೇನೋ ಎಂದು ಅನಿಸುತ್ತದೆ. ಗಹನವಾದ ಕಥಾವಸ್ತುವನ್ನು ಕುರಿತು ಗಂಭೀರವಾಗಿ ಹೇಳುತ್ತಾ ಹೋಗುವ ಕಾದಂಬರಿಕಾರರು ಅಷ್ಟೇ ಸರಸ ಸುಂದರ ಪರಿಹಾಸವನ್ನೂ ಮಾಡಬಲ್ಲರು.

ಇಷ್ಟೊಂದು ವ್ಯಕ್ತಿ ಹಾಗೂ ಸನ್ನಿವೇಶಗಳ ಚಿತ್ರಣದಿಂದ ಕಾದಂಬರಿ ತುಂಬಿ ಹೋಗಿದ್ದರೂ ಅದು ಕೇವಲ ಸಂತೆಯಲ್ಲ, ಕಾದಂಬರಿಕಾರರ ದೊಡ್ಡಪ್ರದರ್ಶನಕ್ಕೆ ಒಂದು ಉದ್ದೇಶವಿದೆ. ಕಂಟಕಕಾರರ ಸಮಾಜಘಾತುಕ ಶಕ್ತಿಗಳನ್ನು ಎತ್ತಿ ತೋರಿಸುವುದು ವೈಯಕ್ತಿಕ ಮಾನವ ದ್ವೇಷ ಎಲ್ಲೂ ಕಾಣುವುದಿಲ್ಲ.

ಕೊನೆಯದಾಗಿ ಕಾದಂಬರಿಕಾರರು 10 ವರ್ಷಗಳ ನಂತರ ಕಾನೂರಿನ ಚಿತ್ರವನ್ನು ವರ್ಣಿಸಿ ಅಸೀಮ ಆಶಾವಾದಿತ್ವವನ್ನು ವ್ಯಕ್ತಗೊಳಿಸಿದ್ದಾರೆ. ಇದರಲ್ಲಿ ವಾಸ್ತವತೆಗಿಂತ ಕಲ್ಪನೆಯ ಬಣ್ಣ ತುಸು ಹೆಚ್ಚಾದರೂ ಇದಕ್ಕೆ ಕಾರಣ ಅವರ ಹೃದಯದ ಎಲ್ಲವೂ ಒಳಿತಾಗಲಿ ಮಂಗಳಕರವಾಗಲಿ ಎಂಬ ಸದಾಶಯವಾಗಿದೆ. ಅನಾವಶ್ಯಕವೆನ್ನಿಸಬಹುದಾದ ದೃಶ್ಯಗಳು ಸಹ ತಮ್ಮ ಸಹಜ ಸೌಂದರ್ಯದಿಂದ ಆಕರ್ಷಿಸುತ್ತವೆ. "ಕುವೆಂಪುರವರ ಶಬ್ದಚಿತ್ರಕಲೆಯನ್ನು ಆಧುನಿಕ ಅಮೆರಿಕನ್ ಕಾದಂಬರಿಕಾರ ವಿಲಿಯಂ ಫಾಲ್ಕನರ ಅವರ ನಿರೂಪಣಾ ಕಲೆಯೊಂದಿಗೆ ಹೋಲಿಸಬಹುದಾಗಿದೆ."[೧]

ಕಾದಂಬರಿಯಲ್ಲಿ ಕಂಡುಬರುವ ದರ್ಶನವೂ ಶ್ರೀ ಕುವೆಂಪು ಅವರದೇ ಆದ ವೈಶಿಷ್ಟ್ಯವುಳ್ಳದ್ದಾಗಿದೆ. ಮಾನವನ ಶಕ್ತಿಯಲ್ಲಿ ಭವಿಷ್ಯದಲ್ಲಡಗಿರುವ ವಿಶ್ವಾಸದ ಪ್ರತೀಕಗಳೆಂಬಂತೆ ಹೂವಯ್ಯ ಸೀತೆ ಇಲ್ಲಿ ಆವಿರ್ಭವಿಸಿದ್ದಾರೆ. 'ಸಂಯಮದ ಹಿರಿಮೆಯನ್ನು ಋತುವಿನ ಗರಿಮೆಯನ್ನೂ' ಸಾರುವ ಋಷಿದರ್ಶನವಿಲ್ಲದೆ ಮಹಾಪ್ರತಿಭೆ ವಿರಚಿಸಿದ ಮಹಾಕಾದಂಬರಿ. 'ಕಾನೂರು ಹೆಗ್ಗಡಿತಿ' ಎನ್ನಬಹುದಾಗಿದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯ ರಚನೆ 1930ರ ಸುಮಾರಿನಲ್ಲೇ 'ವಿಚಾರವಾಹಿನಿ' ಪತ್ರಿಕೆಯಲ್ಲಿ ಮೊದಲ ಸುಮಾರು 80 ಪುಟ ಪ್ರಕಟವಾಗಿದ್ದವು. ಆದರೆ ಅದು ಒಟ್ಟೂ ಶಿಲ್ಪಗೊಂಡುದ್ದು 1960ರ ದಶಕದಲ್ಲಿ, 'ಮಲೆಗಳಲ್ಲಿ ಮದುಮಗಳು' ಕಾದಂಬರಿಯನ್ನು ಮಲೆನಾಡಿನ ರಾಮಾಯಣವೆನ್ನಬಹುದು ಅಥವಾ ಹಾಗಲ್ಲ ಸಮಂಜಸವಾಗಿ ಹೇಳುವುದಾದರೆ ಇದನ್ನು 'ಮಲೆನಾಡಿನ ಮಹಾಭಾರತ'[೨] ಎನ್ನಬಹುದು. ಮಹಾಭಾರತವು ಒಂದು ಬೃಹತ್ ಕಥಾಕೋಶ, ವ್ಯಾಪಕವಾದ ಕಥಾಜಾಲ. ಅಲ್ಲಿ ಯಾವ ಕಥೆ ಮುಖ್ಯ ಯಾವ ಸನ್ನಿವೇಶ ಮುಖ್ಯ, ಯಾವ ವ್ಯಕ್ತಿ ಮುಖ್ಯ , ಯಾವ ಆಶಯ ಮುಖ್ಯ, ಯಾವ ಚಿಂತನೆ ಮುಖ್ಯ ಎಂದು ಹೇಳಲಿಕ್ಕೆ ಬರುವುದಿಲ್ಲ, 'ಮಲೆಗಳಲ್ಲಿ ಮದುಮಗಳು' ಸಂಬಂಧಿಸಿ ಕುವೆಂಪು ಓದುಗರಿಗೆ ಎಂಬ ಮುಮ್ಮಾತಿನಲ್ಲಿ ಇದನ್ನೇ ಹೇಳುತ್ತಾರೆ.

ಈ ಕಾದಂಬರಿಯಲ್ಲಿ ಹಸಿಹಸಿ ವಾಸ್ತವದ ಕಥಾಬಿಂಬಗಳಿವೆ. ಹಾಗೇ ಪುರಾಣದ ಥರದ ಅವಾಸ್ತವ ಅತಿವಾಸ್ತವ ಗುಂಭಗಳಿದ್ದಾವೆ; ಮಲೆನಾಡು ಕೊಂಪೆಯ ಹೊರ ಕಥೆಗೆ ಸಮಾನಾಂತರವಾಗಿ ನಿಯತ ನಿಯಂತ್ರಿತದ ಒಳಕಥೆಯಿದೆ. ಈ ಕಾದಂಬರಿಯ ಕ್ಷೇತ್ರವು ಕಾನೂರಿನ ಥರದ್ದೇ – ಅದಕ್ಕೆ

---

೧. ಸಾಹಿತ್ಯಾರಾಧನೆ – ಸಂ.ದೇ.ಜ.ಗೌ, ಸಿಪಿಕೆ, ಪುಟ ೧೦೧

೨. ಕುವೆಂಪು ಪುಟ್ಟಗನ್ನಡಿ – ಕೆ.ವಿ.ಸುಬ್ಬಣ್ಣ , ಪುಟ - ೬೪

ತುಂಬಾ ದೂರವೇನೂ ಅಲ್ಲದ ತೀರ್ಥಹಳ್ಳಿ ತಾಲ್ಲೂಕಿನ ಇನ್ನೊಂದು ಕೊಂಪೆ ಸೀಮೆ ವ್ಯಕ್ತಿ, ಕುಟುಂಬ, ಜಾತಿ–ವೃತ್ತಿ–ಗುಣ–ಸ್ವಭಾವ–ನಡಾವಳಿಗಳಲ್ಲಿ ಅಲ್ಲಿಗಿಂತ ಇಲ್ಲಿ ಇನ್ನೂ ಹೆಚ್ಚಿನ ವೈವಿಧ್ಯ ವೈಲಕ್ಷ್ಯಣ್ಯಗಳಿವೆ. ಹೊಸ ನಾಗರಿಕತೆಯ ಅನೇಕ ಅಂಶಗಳು, ಕ್ರಿಶ್ಚಿಯನ್ ಮಿಶನರಿ ಮುಂತಾದವು ಈ ಸೀಮೆಯೊಳಗೆ ಕಾಲಿಟ್ಟು ಇಲ್ಲಿನ ಬಡ ಬದುಕನ್ನು ರೂಢಿಯ ನೀತಿ ನಡಾವಳಿಗಳನ್ನು ಕದಡುತ್ತಿರುವುದು ಇಲ್ಲಿ ಹೆಚ್ಚು ಸ್ಪಷ್ಟವಾಗಿ ಕಾಣಿಸುತ್ತದೆ.

'ಕಾನೂರು ಹೆಗ್ಗಡಿತಿಯಲ್ಲಿ ಸಮಾಜ ವಿಜ್ಞಾನಿಯು ಅಪೇಕ್ಷಿಸುವ ವಿಪುಲ ಸಂಗತಿಗಳು ದೊರಕುವ ಹಾಗೆ, ಇಲ್ಲಿ ಅದರ ಜತೆಗೆ ಇತಿಹಾಸಕಾರನಿಗೂ ಬೇಕೆನ್ನುವಷ್ಟು ಸಾಮಗ್ರಿಗಳು ಸಿಕ್ಕುತ್ತವೆ. ಈ ಬಗೆಯಲ್ಲಿ ವಾಸ್ತವಿಕವೂ ಸಮೃದ್ಧವೂ ರೋಚಕವೂ ಆದ ಈ ಕಾದಂಬರಿಯು ಓದುಗರನ್ನು ವಿಮರ್ಶಕರನ್ನು ಆಕರ್ಷಿಸಿದೆ.

'ಮಲೆಗಳಲ್ಲಿ ಮದುಮಗಳು' ಎಂಬ ಶೀರ್ಷಿಕೆಯನ್ನು ನೋಡಿದರೆ ಅದು ಸ್ಥೂಲವಾಗಿ ಕಾದಂಬರಿಯಲ್ಲಿ ಬರುವ ಚಿನ್ನಮ್ಮಳಿಗೆ ಅನ್ವಯಿಸುತ್ತದೆ. ಹೇಗೆಂದರೆ ಕೊನೆಯಲ್ಲಿ ಲೇಖಕರೇ ಅವಳನ್ನು ವಧೂ ಚಿನ್ನಮ್ಮ ಎಂದು ನಿರ್ದೇಶಿಸುತ್ತಾರೆ. ಹಸುಳೆಯಾಗಿದ್ದಾಗಲೇ ಮುಕುಂದಯ್ಯನೇ ತನ್ನ ಗಂಡನೆಂದು ಜನ್ಮಾಂತರ ಜ್ಞಾನದಿಂದ ಎನ್ನುವಂತೆ ಕಂಡುಕೊಂಡಿದ್ದಳು. ವಾಸ್ತವದಲ್ಲಿ ಹಾಗೆ ಆಗಬೇಕೆಂದು ಸಂಕಲ್ಪಿಸಿಕೊಂಡಿದ್ದಳು. ಮುಂದೆ ಸಂಕಷ್ಟ ಸಂಕಟಗಳೊದಗಿ ಹೇಗೂ ನಿವಾರಣೆ ಹಾಗಿ ಮುಕುಂದಯ್ಯನನ್ನ ಸೇರುತ್ತಾಳೆ.

ಕಾದಂಬರಿಯಲ್ಲಿ 'ಮದುಮಗಳು' ಎನ್ನುವ ವಿಶೇಷಣವನ್ನು ಎತ್ತಿ ಹೇಳಿರುವುದರಿಂದ ಇದು ಹೆಣ್ಣು ಗಂಡು ಸಂಬಂಧ, ಲೈಂಗಿಕತೆ, ದಾಂಪತ್ಯ ಇತ್ಯಾದಿಗಳನ್ನು ಸೂಚಿಸಬಹುದು. ಕಾದಂಬರಿಯು ಅದನ್ನು ಸಮರ್ಥಿಸುತ್ತದೆ. ಕಾದಂಬರಿಯಲ್ಲಿ ಹೆಣ್ಣು ಗಂಡುಗಳ ಪ್ರೀತಿ, ಸೆಳೆತ, ಕಾಮ, ವ್ಯಭಿಚಾರ, ಅತ್ಯಾಚಾರ ಮುಂತಾದ ಕಥೆಗಳಿಂದಲೇ ಅರ್ಧ ಭಾಗದಿಂದ ಕೂಡಿದೆ. ಕಾದಂಬರಿಯ ಇನ್ನುಳಿದ ಭಾಗವು ಮುಖ್ಯವಾಗಿ ಹೊರಗಿನಿಂದ ಬರುವ ಪ್ರಭಾವಗಳು ಇಲ್ಲಿನ ರೂಢಿಜಡ ಜೀವನಕ್ರಮವನ್ನು ಕಲಕುತ್ತ ಆಸೆಗೊಳಿಸುತ್ತ ಚೆಂಬಲಿಸುತ್ತ ಪರಿವರ್ತಿಸುತ್ತ ಹೋಗುವ ಪ್ರಕ್ರಿಯೆಯನ್ನೊಳಗೊಂಡಿದೆ ಎನ್ನಬಹುದು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯು 'ಆಧುನಿಕ ಕುಮಾರ ಸಂಭವ' ಎಂದು ಕರೆದಿದ್ದಾರೆ. ಕೆ.ವಿ.ಸುಬ್ಬಣ್ಣನವರು ಕುಮಾರ ಸಂಭವವನ್ನ ಕಾಳಿದಾಸ 7ನೇ ಸರ್ಗಕ್ಕೆ ನಿಲ್ಲಿಸಿದ್ದಾನೆ ಏಕೆಂದು ಕೆಲವರು ಊಹೆ ಮಾಡಿದ್ದಾರೆ. ಪ್ರಾಯಶಃ ಕಾಳಿದಾಸನಿಗೆ ಕುಮಾರ ಸಂಭವದ ಕಥೆ ಮುಖ್ಯವಾಗಿರಲಿಲ್ಲ, ಕುಮಾರ ಸಂಭವಕ್ಕೆ ಕಾರಣವಾದ ಒಂದು ವಿಶಿಷ್ಟ ಕಾಲದ ವಿಶಿಷ್ಟ ಸಾಮೂಹಿಕ ಪ್ರಕ್ರಿಯೆಯು ಮುಖ್ಯವಾಗಿತ್ತು. 'ಮಲೆಗಳಲ್ಲಿ ಮದುಮಗಳು' ನಲ್ಲೂ ಪುಷ್ಪವತಿಯಾಗಿ- ಮುಕುಂದಯ್ಯನಿಗೆ ಕಾದು ನಿಂತ ಚಿನ್ನಮ್ಮನ ಚಿತ್ರದಿಂದ ಕಾದಂಬರಿಯು ಕೊನೆಗೊಳ್ಳುತ್ತದೆ. ಈಗ ಶೀರ್ಷಿಕೆಯ ಬಗ್ಗೆ ಯೋಚಿಸಿದರೆ ಚಿನ್ನಮ್ಮಳನ್ನು ಸೂಚಿಸುವ ಹಾಗೆ ಹೊಸ ಬದುಕು ಸಂಸ್ಕೃತಿಗಳ ಹುಟ್ಟಿಗೆ ಕ್ಷೇತ್ರವಾಗಲು ಕಾತರಿಸಿ ನೆರೆದು ನಿಂತಿರುವ ಮಲೆನಾಡು ಸಮುದಾಯವನ್ನೇ ಧ್ವನಿಸಬಹುದು.

ಈ ಕಾದಂಬರಿಯ ವಿಸ್ತಾರವಾದ ಲೈಂಗಿಕ ಪ್ರಪಂಚದಲ್ಲಿ ಚಿನ್ನಮ್ಮ–ಮುಕುಂದಯ್ಯರ ಜೋಡಿಯ ಹಾಗೆ ಇನ್ನೆರಡು ಯಶಸ್ವಿ ಜೋಡಿಗಳು ಕಾಣಸಿಗುತ್ತವೆ. ತಿಮ್ಮಿ–ಗುತ್ತಿ, ಐತ–ಪಿಂಚಲು ಕಾದಂಬರಿಯಲ್ಲಿ ಎದ್ದು ಕಾಣಿಸುವುದೇ ಇಲ್ಲ. ಓದುತ್ತ ಹೋದಂತೆ ಅಲ್ಲಿಎಲ್ಲಾಕಡೆ ತುಂಬಿ ಕಾಣಿಸುವುದು ಕ್ರೌರ್ಯ, ಹಿಂಸೆ, ವಿಕಾರ–ವಿಕಲತೆಗಳಿಂದ ಎದೆ ನಡುಗಿಸುವ ಸಂಗತಿಗಳೇ. ಸಾಮಾಜಿಕ ವೈಕಲ್ಯ ವೈಷಮ್ಯಗಳು ಇಲ್ಲಿನ ಲೈಂಗಿಕ ಪಶುಲೋಕವನ್ನು ಮತ್ತು ಅಸಹ್ಯಗೊಳಿಸಿದೆ. ವಿಸ್ತಾರ ಲೈಂಗಿಕ ಕ್ರೌರ್ಯಗಳ ನಡುವೆ ಮಾನವೀಯ ಸಂಬಂಧಗಳು ಹೇಗೆ ಇರಬಹುದು ಎಂಬುದನ್ನು ಗುತ್ತಿ ತಿಮ್ಮಿ, ಐತ ಪಿಂಚಲು ಜೋಡಿಗಳು ದ್ವೀಪವಾಗಿ ನಿಲ್ಲುತ್ತವೆ. ಮಾನಸಿಕ ಲೈಂಗಿಕವನ್ನು ಚಿತ್ರಿಸುತ್ತಾ ಬರುತ್ತಾರೆ.

ಮಲೆಗಳಲ್ಲಿ ಮದುಮಗಳು ಒಂದು ಕಾಲದ ಮಲೆನಾಡಿನ ಜೀವನ ಚಿತ್ರವನ್ನು ಅದರೆಲ್ಲ ಚೆಲುವು ಮತ್ತು ವಿಕಾರಗಳಲ್ಲಿ ಸೂಕ್ಷ್ಮವಾಗಿ ಕಟ್ಟಿಕೊಡುತ್ತದೆ. ಇಷ್ಟೇ ಆಗಿದ್ದರೆ ಈ ಕಾದಂಬರಿ ನಮ್ಮ ಸಾಹಿತ್ಯ ಪರಂಪರೆಯಲ್ಲಿ ಒಂದು ಶ್ರೇಷ್ಠ ಕೃತಿ ಎಂದು ಪರಿಗಣಿತವಾಗಬೇಕಾಗುತ್ತಿರಲಿಲ್ಲ. ಕಾದಂಬರಿಯ ಪ್ರಾಮುಖ್ಯ ಪ್ರಸ್ತುತತೆ ಶ್ರೇಷ್ಠತೆಗಳಿರುವುದೇ ಇಂಥ ಮೇಲುನೋಟಕ್ಕೆ ಸರಳವೂ, ಸುಂದರವೂ , ಸ್ಥಿರವೂ ಪ್ರತಿಭಟನೆಯ ನೆಲೆಗಳನ್ನು ಅನಾವರಣಗೊಳಿಸಿರುವುದರಲ್ಲಿ ಸೇಸನಾಯ್ಕ ದೇವಯ್ಯ, ಮುಕುಂದಯ್ಯ , ಗುತ್ತಿ, ತಿಮ್ಮಿ , ಚಿನ್ನಮ್ಮ, ಹೀಗೆ ಹಲವು ಪಾತ್ರಗಳು ಕಾದಂಬರಿಯ ಈ ನೆಲೆಗಳನ್ನು ಬೇರೆ ಬೇರೆ ವಿವರಗಳಲ್ಲಿ ನಿಜಗೊಳಿಸುತ್ತ ಹೋಗುತ್ತದೆ.

ಈ ಕಾದಂಬರಿಯ ಎರಡು ಪ್ರಧಾನ ಎಳೆಗಳು ಮುಕುಂದಯ್ಯ–ಚಿನ್ನಮ್ಮ,ಗುತ್ತಿ–ತಿಮ್ಮಿ ಪ್ರೇಮ ಸಾಹಸ. ಈ ನಾಲ್ಕು ಪಾತ್ರಗಳಿಗೆ ಬಂಡೇಳುವ ಆಯಾಮಗಳಿರುವಂತೆ ತೀವ್ರ ಸೌಂದರ್ಯಾರಾಧನೆಯ ಆಯಾಮಗಳೂ ಇರುವುದು ಕಾನೂರು ಹೆಗ್ಗಡಿತಿಯಲ್ಲಿ ಇಂಥ ಆಯಾಮವಿರುವುದು ಹೂವಯ್ಯನಿಗೆ ಮಾತ್ರ. ಆದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ವಿಸ್ತೃತ ವ್ಯಾಪಕತೆ, ಬಹುತ್ವ ಮತ್ತು ಮಹತ್ವಾಕಾಂಕ್ಷೆಗಳೂ ಸ್ಪಷ್ಟವಾಗುತ್ತ ಹೋಗುತ್ತವೆ.

ಒಟ್ಟಾರೆ ಕಾದಂಬರಿಯ ಮನುಷ್ಯ ಸಂಬಂಧಗಳಲ್ಲಿ ಎಷ್ಟೇ ತುಮುಲ ಸಂಘರ್ಷ, ಹಿಂಸೆ, ಕ್ರೌರ್ಯ, ದೌರ್ಜನ್ಯ, ಶೋಷಣೆಗಳಿದ್ದರೂ ಬದುಕನ್ನು ಸಹ್ಯ ಮಾಡುವ ಒಳ ಬಂಡಾಯಗಳು, ಸ್ನೇಹ, ಸಹಕಾರ, ಹಾಸ್ಯಪ್ರಜ್ಞೆ ಒಳ ಉಪಾಯಗಳೂ ಇರುವುದನ್ನು ಗಮನಿಸಿದ್ದಾರೆ. ಹಾಗಾಗಿ ಇಲ್ಲಿನ ಕಥೆಗಳು ಕೇವಲ ಕರುಣಾಜನಕವಾಗಿಲ್ಲ, ಸಮಾನತೆಯ ಶಿಖರಪ್ರಾಯವಾದ ಕಾದಂಬರಿಯಾಗಿದೆ. ಪಾತ್ರಗಳು ಪ್ರಕೃತಿಗೆ ಹತ್ತಿರವಾಗಿ ಮಿಡಿದು ತುಡಿದು ತಮ್ಮ ತಮ್ಮ ಇತಿಮಿತಿಯ ಒಳಗೆ ಪೂರ್ಣತೆಯನ್ನು ಕಂಡುಕೊಂಡು ಪುನೀತವಾಗುತ್ತ ಪ್ರವಹಿಸುತ್ತವೆ. ಕೆಲವು ಕಡೆ ಶೋಷಣೆಗೆ ಸಿಕ್ಕಿ ಸಾಯುತ್ತವೆ.

ಮದುಮಗಳು ಕಾದಂಬರಿಯಲ್ಲಿ ಮೊದಲು ಗಮನಿಸಬೇಕಾದ ಅತಿ ಮುಖ್ಯವಾದ ಅಂಶವೆಂದರೆ ಪ್ರಾದೇಶಿಕತೆ ಶಿವಮೊಗ್ಗ ಜಿಲ್ಲೆಯ ದಟ್ಟವಾದ ಮಲೆನಾಡಿನ ಪರಿಸರದಲ್ಲಿ ಈ ಕಾದಂಬರಿಯ ಕಥೆ ಚಿತ್ರಿತಗೊಂಡಿದೆ. ಈ ಕಾದಂಬರಿಯಲ್ಲಿ ಪ್ರಾದೇಶಿಕತೆಯ ಕೃತಿಯಾದ್ಯಂತ ಅಖಂಡವಾಗಿ ವ್ಯಾಪಿಸಿರುವ ಒಂದು ಅದಮ್ಯ ಶಕ್ತಿಯಾಗಿದೆ. ತೀರ್ಥಹಳ್ಳಿ ತಾಲ್ಲೂಕಿನ ಮೇಗರಳ್ಳಿ ಸೀಮೆಯ ದುರ್ಗಮವಾದ

ಪರ್ವತಾರಣ್ಯಗಳ ನೆಲೆಬೀಡು. ಈ ಮಲೆನಾಡು ಮಡಿಲಲ್ಲಿಯ ಸಿಂಬಾವಿ ಲಕ್ಕುಂದ ಮೇಗರಳ್ಳಿ ಹಳೆಮನೆ, ಕೋಣೂರು, ಬೆಟ್ಟಳ್ಳಿ ಪ್ರದೇಶಗಳ ಶ್ರೀ ಸಾಮಾನ್ಯರ ಬದುಕು ಕ್ಷುದ್ರ ಅಲ್ಪ ಜಟಿಲ ರಾಗ ದ್ವೇಷಮಯ ಜೀವನ ಜಾಲ ಈ ಕಾದಂಬರಿಯ ವಸ್ತು.

ಈ ಕಾದಂಬರಿಯ ಸ್ವರೂಪ ಗಾತ್ರದಲ್ಲಾಗಲಿ ಮಹತ್ವದಲ್ಲಾಗಲಿ ಬೃಹತ್ತಾದುದು ಇದು ಮಲೆನಾಡಿನ ಗಟ್ಟಿ ನೆಲದಲ್ಲಿ ಬೇರು ಬಿಟ್ಟು ವೈವಿಧ್ಯಮಯ ಬದುಕನ್ನು ಆರ್ವಿಭವಿಸಿಕೊಂಡು ಪ್ರಾದೇಶಿಕತೆಯ ಮಣ್ಣಿನ ವಾಸನೆಯಿಂದ ಅದರ ಸುತ್ತಲಿನ ವಾಸ್ತವಿಕ ಬದುಕನ್ನು ಒಳಗೊಂಡ ಈ ಕಾದಂಬರಿ ಕನ್ನಡ ಸಾಹಿತ್ಯಕ್ಕೆ ಕುವೆಂಪು ನೀಡಿದ ವಿಶಿಷ್ಟವಾದ ಪ್ರಮುಖ ಕೊಡುಗೆಯಾಗಿದೆ. ಮಲೆನಾಡಿನ ಕ್ರಿಯಾಶೀಲ ಬದುಕಿಗೆ ಹೊರತಾದ ವಿಷಯವಾಗಲೀ ಪಾತ್ರವಾಗಲೀ ಇಲ್ಲಿ ಒಂದೂ ಇಲ್ಲ. ಸನ್ನಿವೇಶ ಪ್ರಧಾನವಾದ ಕಥೆಯ ಸಂವಿಧಾನ ಓದುಗನ ಲಕ್ಷ್ಯವನ್ನು ಸೆಳೆದು ಕುತೂಹಲವನ್ನು ಕೆರಳಿಸಿ ಘಟನಾತ್ಮಕ ಚಿತ್ರಗಳು ಕಣ್ಣಮುಂದೆ ನಿಲ್ಲುತ್ತವೆ. ಇದು ಈ ಕಾದಂಬರಿಯ ಯಶಸ್ಸಿಗೆ ಕಾರಣವಾಗಿದೆ.

ಮಾನವ ಪ್ರವೃತ್ತಿಗಳ ಸಹಜ ಅಭಿವ್ಯಕ್ತಿಯನ್ನು ಕಾಣಬಹುದು. ಜೀವನವನ್ನು ಯಥಾವತ್ತಾಗಿ ನೋಡುವ ಅನುಭವಿಸುವ ಮತ್ತು ಕಲೆಗಾಗಿ ರೂಪಿಸುವ ಪ್ರಾಮಾಣಿಕ ಪ್ರಯತ್ನದ ಫಲ ಈ ಕಾದಂಬರಿ.

ಒಂದು ಪ್ರಾದೇಶಿಕ ವಲಯದ ಚಿತ್ರಣದ ಹಂದರದಲ್ಲಿ ವಿಶ್ವ ವ್ಯಾಪಕತೆಯನ್ನು ಧ್ವನಿಸುತ್ತದೆ. ಈ ಕಾದಂಬರಿಯಲ್ಲಿ ಆದರ್ಶಪ್ರಾಯವಾದ ಪಾತ್ರಗಳೆಂದರೆ ಹುಲಿಯ ನಾಯಿ ಮತ್ತು ಗುತ್ತಿ, ಐತ, ಪಿಂಚಲು, ಗುತ್ತಿಪ್ರಕೃತಿಯ ಪ್ರತಿರೂಪ ಪ್ರಕೃತಿಗೂ ಗುತ್ತಿಗೂ ಇದ್ದ ನಿಕಟ ಸಂಬಂಧ ಪ್ರಕೃತಿಯ ಒಂದಂಶ. ಕುವೆಂಪು ಅವರ ಪೂರ್ಣದೃಷ್ಟಿಯಲ್ಲಿ ಐತ–ಪಿಂಚಲು, ಹೊಟ್ಟೆಪಾಡಿಗಾಗಿ ದುಡಿಯಲು ಬಂದಿದ್ದ ಬಿಲ್ಲವರ ಜಾತಿಯ ತಮ್ಮ ಬಡ ಕೂಲಿಯಾಳುಗಳಂತೆ ಕಾಣಿಸುತ್ತಿರಲಿಲ್ಲ. ಶಿವಶಿವಾಣಿಯರಂತೆ ತೋರಿದರು. ಹೀಗೆ ಸಾಮಾನ್ಯರಲ್ಲೂ ಸುಪ್ತವಾಗಿ ಎವೆ ಮುಚ್ಚಿ ಕುಳಿತಿರುವ ಅಸಮಾನ್ಯ ಶಕ್ತಿಯನ್ನು ಕಂಡು ಅದನ್ನು ಉಚ್ಚರಿಸಿ ಗೌರಿಶಂಕರದೆತ್ತರಕ್ಕೆ ಕೊಂಡೊಯ್ಯುವ ಅಪೂರ್ವದೃಷ್ಟಿ ಕುವೆಂಪು ಅವರದ್ದು.

ಮಲೆಗಳಲ್ಲಿ ಮದುಮಗಳು ಕಾದಂಬರಿಯನ್ನು ಪ್ರಾದೇಶಿಕ ಎಂದು ಕರೆದರೆ ಅಪಚಾರವೆಸಗಿದಂತಾಗುತ್ತದೆ. ಕಾದಂಬರಿ ಒಂದು ಪ್ರಾದೇಶಿಕ ವಲಯದ ಚಿತ್ರಣದ ಹಂದರದಲ್ಲಿ ವಿಶ್ವವ್ಯಾಪಕತೆಯನ್ನು ಧ್ವನಿಸುತ್ತದೆ. ವಿವೇಕಾನಂದರ ಚಿಕಾಗೋ ಸಮ್ಮೇಳನದಲ್ಲಿ ವಿವೇಕಾನಂದರು ಜಗತ್ತಿಗೆ ಹೊಸ ಬೆಳಕನ್ನು ನೀಡುವ ಸಮಯದಲ್ಲಿ ಪಾದ್ರಿ ಜೀವರತ್ನಯ್ಯ ಮಲೆನಾಡಿನ ಮೂಲೆಯಲ್ಲಿ ಮತಾಂತರ ಕಾರ್ಯದಲ್ಲಿ ಪ್ರವೃತ್ತನಾಗಿರುತ್ತಾನೆ. ಹೀಗೆ ಏಕಕಾಲದಲ್ಲಿ ನಡೆಯುವ ವ್ಯಾಪಾರದಿಂದ ವ್ಯಾಪಕವಾಗಿ ಕಾದಂಬರಿ ವಿಶ್ವಸೇತುವಾಗಿದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯ ವಸ್ತು ನವ್ಯದ ಸವಾಲುಗಳನ್ನು ಸ್ವೀಕರಿಸಿದ್ದು ಇದರ ರಚನೆ ಉದ್ದೇಶಗಳಲ್ಲಿ ನೈಜತೆಗೆ ವಸ್ತುಸ್ಥಿತಿಗೆ ಆದ್ಯತೆ ನೀಡಲಾಗಿದೆ. ಮಣ್ಣಿನ ವಾಸನೆ, ಕಟು ವಾಸ್ತವದ ಗಮಲು ನಿಜ ಜೀವನದ ಒಡಲು ಗೋಚರವಾಗುತ್ತದೆ. ನವ್ಯರ ಆರಂಭ ಕಾಲದಲ್ಲಿ ಹೊರಬಂದ ಕೃತಿ

ಇದು ನವ್ಯೋತ್ತರ ಕಾಲದಲ್ಲಿ ಕಾಣಿಸಿಕೊಂಡ ದಲಿತ, ಬಂಡಾಯ, ಪ್ರತಿಭಟನಾ ಸ್ತ್ರೀವಾದ, ದೇಶೀವಾದ ಮುಂತಾದ ನಿಲುವುಗಳಿಗೆ ಚಳುವಳಿಗಳಿಗೆ ಆಕರವೆನಿಸಿದ ಪ್ರೇರಕ ಕೃತಿಯಿದು. ''ದಾಸ್ತೊವಸ್ಕಿಯ ಕರಮ್ ಜೋವ ಬಂಧುಗಳು, ಟಾಲ್‌ಸ್ಟಾಯ್ ಅವರ ಯುದ್ಧ ಮತ್ತು ಶಾಂತಿ, ಇಟಾಲಿಯನ್‌ನ ತಿಂತೋರತ್ತೋನ ಸ್ವರ್ಗ ಮತ್ತು ನರಕ ಮುಂತಾದ ಮಹತ್ ಕೃತಿಗಳು ಒದಗಿಸುವ ಅದ್ಭುತ ರಸಾನುಭವವನ್ನು, ಜೀವನಾನುಭವವನ್ನು 'ಮಲೆಗಳಲ್ಲಿಮದುಮಗಳು' ಮಹಾಕಾದಂಬರಿ ಒದಗಿಸುತ್ತದೆ. ಇದು ಕುವೆಂಪು ಅವರ ರಾಮಾಯಣದಷ್ಟೆ ಮಹತ್ವದ ಸಿದ್ಧಕೃತಿ ಎಂದು ನನಗನ್ನಿಸುತ್ತದೆ''[೧]ಎನ್ನುತ್ತಾರೆ. ಕು.ಶಿ.ಹರಿದಾಸಭಟ್ಟರು.

ಅವಿಭಕ್ತ ಕುಟುಂಬ ಒಡೆದು ಹೋಗುವ ವಿಘಟನಾ ಕ್ರಿಯೆ 'ಕಾನೂರು ಹೆಗ್ಗಡಿತಿ' ಯಲ್ಲಿ ಕೆಲಸ ಮಾಡಿದೆ. ಕೌಟುಂಬಿಕ ಬದಲಾವಣೆಯಲ್ಲಾದ ವಿಲಕ್ಷಣ ಪರಿಯನ್ನಿದು ಪರಿಚಯಿಸುತ್ತದೆ. ಉದಾ : ಕಾನೂರು ಚಂದ್ರೇಗೌಡರ ಕುಟುಂಬ ಪಾಲಾಗುವುದನ್ನು ನೋಡಬಹುದು. ಸುಮಾರು ಮೂರು ದಶಕಗಳಲ್ಲಿ ನಡೆಯುವ ಕೌಟುಂಬಿಕ ಚಲನೆ ಇಲ್ಲಿ ಗೋಚರಿಸುತ್ತದೆ. ಅದರ ಪರಿಣಾಮಗಳು ಓದುಗರನ್ನು ಚಕಿತಗೊಳಿಸುತ್ತವೆ. ಆದರೆ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕುಟುಂಬ ವಿಘಟನೆಯ ಬದಲಾಗಿ ಕುಟುಂಬ ಸಂಯೋಜನೆಯ ರಚನಾತ್ಮಕ ಕ್ರಿಯೆ ಕೆಲಸ ಮಾಡಿದೆ. ಇಲ್ಲಿ ಕುಟುಂಬಗಳನ್ನು ಕೂಡಿಸುವ ಕೆಲಸ ಮಾಡಿದೆ.

ಎರಡೂ ಕಾದಂಬರಿಗಳಲ್ಲಿ ಸ್ತ್ರೀ ಮಾತೃಕೆಯ ಪ್ರತಿಷ್ಠಾಪನೆ ಎದ್ದು ಕಾಣುತ್ತದೆ. ಸ್ವಭಾವತಃ ಕುವೆಂಪು ಅವರದು ಸ್ತ್ರೀಪರವಾದ ಧೋರಣೆ ಒಲವು ಅದು ನಿಚ್ಚಳವಾಗಿ ಅವರ ಎಲ್ಲ ಕೃತಿಗಳಲ್ಲಿ ಹಾಸು ಹೊಕ್ಕಾಗಿ ನೆಲೆಸಿದೆ. ಕಾದಂಬರಿಗಳು ಕೂಡ ಅದಕ್ಕೆ ಹೊರತಾಗುಳಿದಿಲ್ಲ. ಕಾದಂಬರಿಗಳ ಶೀರ್ಷಿಕೆಗಳೇ ಅದನ್ನು ಪ್ರತಿಧ್ವನಿಸುತ್ತಿವೆ. ವಿಶಿಷ್ಟ ಪಾತ್ರಗಳನ್ನು ತುಂಬಿಕೊಂಡ ಜೀವಂತ ಕಣಜಗಳಾಗಿವೆ. ಒಂದೊಂದು ಪಾತ್ರವೂ ಜೀವನದ ವಿಭಿನ್ನ ಆಯಾಮಗಳನ್ನು ಮೌಲ್ಯಗಳನ್ನು ಬದುಕಿನ ರಾಗದ್ವೇಷಗಳನ್ನು ಸಾಕ್ಷಾತ್ಕರಿಸುವಲ್ಲಿ ಯಶಸ್ವಿಯಾಗಿವೆ.

ವಿವಾಹಾತೀತ ನೆಲೆಯಲ್ಲುಳಿದು ಪ್ರೇಮವನ್ನು ಆರಾಧನೆಯಾಗಿ ಮಾಡಿಕೊಂಡವರು ಮುಕುಂದಯ್ಯ–ಚಿನ್ನಮ್ಮ, ಗುತ್ತಿ–ತಿಮ್ಮಿ, ಐತ–ಪಿಂಚಲು ಈ ಜೋಡಿಗಳನ್ನು ಕಾದಂಬರಿ ಓದಿದ ಯಾರೂ ಸುಲಭವಾಗಿ ಮರೆಯಲಾರರು. ಪ್ರೀತಿಗಾಗಿ ಸದಾ ಪರಸ್ಪರ ತುಡಿಯುತ್ತ, ಎಲ್ಲ ಸಮಸ್ಯೆ ಸವಾಲುಗಳನ್ನು ಎದೆಸೆಟೆಸಿ ಎದುರಿಸುತ್ತ ಬದುಕನ್ನು ಸಕಾರಾತ್ಮಕವಾಗಿ ಮಾಡಿಕೊಂಡ ಜಕ್ಕವಕ್ಕಿಗಳ ಜೋಡಿ ಮುಕುಂದಯ್ಯ ಮತ್ತು ಚಿನ್ನಮ್ಮ ಅವರದು, ಗುತ್ತಿ–ತಿಮ್ಮಿ ದಲಿತ ವರ್ಗದ ಪ್ರೇಮ ಪ್ರತಿನಿಧಿಗಳು, ಇವರು ಎದುರಿಸುವ ಸಮಸ್ಯೆಗಳು , ಸವಾಲುಗಳು ಕೂಡ ಜಡ್ಡುಗಟ್ಟಿದ ವ್ಯವಸ್ಥೆಯನ್ನು ಕೆಣಕುವಂಥವು. ಐತ–ಪಿಂಚಲು ಅವರದು ವಿವಾಹಿತ ಜೋಡಿ, ಪ್ರೇಮಿಗಳ ಬಗೆಗೆ ಅಳ್ಳಕ ಹೃದಯವನ್ನು ಹೊಂದಿದ ಈ ದಂಪತಿಗಳು ನಿರ್ವಹಿಸುವ ಪಾತ್ರ ಮಾನವೀಯ ನೆಲೆಯದು. ಪ್ರಾಯಶಃ ಈ ಜೋಡಿ ಇರದಿದ್ದರೆ ಕಾದಂಬರಿಯ ಉಳಿದೆರಡು ಜೋಡಿಗಳ ಅಸ್ತಿತ್ವಕ್ಕೆ ಭಂಗ ಬರುತ್ತಿತ್ತೇನೋ ? ಒಲಿದವರನ್ನು ಒಂದುಗೂಡಿಸುವಲ್ಲಿ ಈ ದಂಪತಿಗಳು ಜೊತೆಯಾಗಿ ನಡೆಸುವ ಹೋರಾಟ ಶ್ಲಾಘನೀಯವಾದದ್ದೇ.

---

೧. ಕು.ಶಿ. ಹರಿದಾಸಭಟ್ಟ – ಕನ್ನಡ ಕಟ್ಟಿದವರು, ಪುಟ–೩೫

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಪಾತ್ರಗಳು ಪ್ರಕೃತಿಗೆ ಸಮೀಪವಾಗಿರುವುದಷ್ಟೇ ಅಲ್ಲ ಪ್ರಕೃತಿಯ ಒಂದು ಅಂಶವೆಂಬಂತೆಯೇ ನಿರ್ವಹಣೆಗೆ ಒಳಗಾಗಿರುವುದು ಒಂದು ವಿಶೇಷ. ಕಾದಂಬರಿಯ ಪ್ರಾರಂಭದಲ್ಲೇ ಸಿಂಬಾವಿ ಭರಮ್ಮೆ ಹೆಗ್ಗಡೆಯವರ ಜೀತದಾಳು ಹೊಲೆಯರ ನಾಯಿ ಗುತ್ತಿಯ ಚಿತ್ರ ಮೂಡಿ ಬಂದಿರುವ ರೀತಿಯನ್ನು ಗಮನಿಸಬಹುದು.

"ನಾಗರಿಕರಿಗೆ ಭೀಕರವಾಗಿ ಕಾಣುವ ವರ್ಷಾಕಾಲದ ಆ ಭಯಂಕರ ಪರ್ವತಾರಣ್ಯದ ರುದ್ರ ಪ್ರಕೃತಿ ಅವನಿಗೆ ಬಹುಕಾಲದ ಪರಿಚಯದಿಂದ ಸಾಧಾರಣವಾಗಿತ್ತು ಅವನೂ ಆ ಪ್ರಕೃತಿಯ ಒಂದಂಶವಾಗಿದ್ದನು; ಬೆಟ್ಟದಲ್ಲಿ ಬಂಡೆಯಂತ ಕಾಡಿನಲ್ಲಿ ಮರದಂತೆ ಅದರ ಒಂದಂಗವಾಗಿದ್ದನು."[೧]

ತನ್ನ ನಾಯಿಯಿಂದ ಗುತ್ತಿಗೆ 'ನಾಯಿಗುತ್ತಿ'ಎಂದೊ ತನ್ನೊಡನೆಯ ಗುತ್ತಿಯ ದೆಸೆಯಿಂದ ನಾಯಿಗೆ 'ಗುತ್ತಿ ನಾಯಿ' ಎಂದೊ ಹೆಸರು ಬಂದಿರುವುದು ಕಲ್ಪನೆಗೆ ಹತ್ತಿರವಾಗಿದೆ. ಕಾದಂಬರಿ ಬೆಳೆಯುತ್ತಿದ್ದಂತೆ ಲೇಖಕರ ಪಾತ್ರ ಕಲ್ಪನೆಯೂ ಬೆಳೆಯತೊಡಗುತ್ತದೆ.

ಈ ಕಾದಂಬರಿಯು 19ನೇ ಶತಮಾನದ ಉತ್ತರಾರ್ಧದಲ್ಲಿ ಕಂಡುಬರುವ ಮಲೆನಾಡಿನ ಜೀವನ ಕ್ರಮಗಳನ್ನು ಅವುಗಳ ಒಳಸೂಕ್ಷ್ಮಾತಿಸೂಕ್ಷ್ಮ ವಿವರಗಳಲ್ಲಿ ಸೆರೆ ಹಿಡಿದಿದ್ದಾರೆ. ಜಾತಿ, ವರ್ಗ, ಲಿಂಗಬೇಧಗಳಿಂದ ಕೂಡಿದ್ದು, ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಅರಳುವ ಪ್ರೇಮ ಮೊಳೆಯುವ ಬಂಡಾಯ ಮೂಡುವ ಹೊಸ ಅರಿವುಗಳನ್ನು ವರ್ಣಿಸುತ್ತದೆ. ಇದನ್ನು ಕಾದಂಬರಿಯು ಕೇವಲ ಮಲೆನಾಡು ನಿಯಂತ್ರಿಸಲಾಗದ ವಸಾಹತುಶಾಹಿ ರಾಜಕಾರಣದ ಅದರಿಂದ ಹುಟ್ಟಿದ ಹೊಸ ವಿದ್ಯಮಾನಗಳ ವಿಶಾಲ ಸಂದರ್ಭದಲ್ಲಿ ಇಟ್ಟು ನಿರ್ವಹಿಸುತ್ತದೆ. ಅಂತಿಮವಾಗಿ ಈ ಎಲ್ಲಾ ಮನುಷ್ಯ ವ್ಯಾಪಾರಗಳನ್ನು ಪ್ರಕೃತಿಯ ನಿತ್ಯ ನಿರಂತರತೆಯ ಆಯಾಮಗಳಲ್ಲಿ ಕಾಲಾತೀತ, ದೇಶಾತೀತ ಸ್ತರಗಳಲ್ಲಿ ಕಾಣಲು ಯತ್ನಿಸುತ್ತದೆ.

ಮಲೆನಾಡನ್ನು ಕುರಿತ ಕುವೆಂಪು ನೋಟದಲ್ಲಿ ಕೇವಲ ಮುಗ್ಧತೆ, ರಮ್ಯತೆಗಳಲ್ಲಿ ಮಲೆನಾಡ ಜೀವನದ ಸರಳ ಸೌಂದರ್ಯವನ್ನು ವರ್ಣಿಸುತ್ತಲೇ ಕಾದಂಬರಿ ಅದರೊಳಗೇ ಅಂತರ್ಗತವಾಗಿರುವ ರೂಕ್ಷತೆ, ಹಿಂಸೆ, ಕ್ರೌರ್ಯಗಳನ್ನು ಎತ್ತಿತೋರಿಸುತ್ತದೆ. ಜಾತಿ, ವರ್ಗ, ಲಿಂಗ ಈ ಮೂರೂ ನೆಲೆಗಳಲ್ಲಿ ಇದು ನಿಜ. ಇಲ್ಲಿ ಜೀತ ಪದ್ಧತಿ ಇದೆ.

ಜೀತದಾಳು ಒಂದು ಯಂತ್ರದಂತೆ ಪ್ರಾಣಿಯಂತೆ ಒಡೆಯನ ಸ್ವತ್ತು, ಇವನಿಗೆ ಯಾವ ಸ್ವಾತಂತ್ರ್ಯವೂ ಇಲ್ಲ, ಹೆಣ್ಣಿನ ಸ್ಥಿತಿಯೂ ಹೆಚ್ಚು ಕಡಿಮೆ ಇದೇ ಸ್ವರೂಪದ್ದು, ಬ್ರಾಹ್ಮಣ, ಒಕ್ಕಲಿಗ, ದಲಿತ ಹೆಣ್ಣುಗಳ ಒಳಗಣ ಮತ್ತು ನಡುವಣ ಸಾಮಾಜಿಕ ಸ್ಥಾನಮಾನಗಳಲ್ಲಿ ಸಾಪೇಕ್ಷ ವ್ಯತ್ಯಾಸಗಳಿರ ಬಹುದಾದರೂ ಲಿಂಗದ ನೆಲೆಯಲ್ಲಿ ಹೆಣ್ಣು ಇಲ್ಲಿ ಕೇವಲ ಗಂಡಿನ ಸ್ವತ್ತು, ಮೇಲ್ಜಾತಿ ವರ್ಗಗಳಲ್ಲಿ ಈ ಅಂಶ ಹೆಚ್ಚು ತೀವ್ರಗೊಳ್ಳುತ್ತ ಜಾತಿ ಶ್ರೇಣೀಕರಣದಲ್ಲಿ ಕೆಳಕ್ಕೆ ಬಂದಂತೆಲ್ಲಾ ಇದು ಹೆಚ್ಚು ಸಡಿಲಗೊಳ್ಳುತ್ತ ಹೋಗುವುದನ್ನು ನೋಡಬಹುದು.

---

೧. ಮಲೆಗಳಲ್ಲಿ ಮದುಮಗಳು – ಕುವೆಂಪು, ನಾಲ್ಕನೇ ಮುದ್ರಣ ೧೯೯೨, ಪುಟ ೭

ಕಾದಂಬರಿಯಲ್ಲಂತೂ ಲೇಖಕರು ಯಾರನ್ನೂ ಯಾವುದನ್ನೂ ವೈಭವೀಕರಿಸಲು ಆದರ್ಶೀಕರಿಸಲು ಹೊರಟಿಲ್ಲ. ಬಹುಕೋನಗಳೆಲ್ಲ ಧ್ವನಿಗಳಲ್ಲಿ ಜಾತಿ ವ್ಯವಸ್ಥೆಯನ್ನು ಚಿತ್ರಿಸುವ ಮಹತ್ವಾಕಾಂಕ್ಷೆ ಕಾಣುತ್ತದೆ.

ಕಾದಂಬರಿಯಲ್ಲಿ ಬರುವ ಪಾತ್ರಗಳು ಬದುಕನ್ನು ಇದ್ದಕ್ಕಿದ್ದಂತೆಯೇ ಸ್ವೀಕರಿಸುತ್ತದೆ. ಹಾಗೆಯೇ ಬದುಕಿನ ನಿಜವಾದ ಅನುಭವಗಳಿಂದ ವಂಚಿತರಾಗದೆ, ವಂಚನೆ ಮಾಡಿಕೊಳ್ಳದೆ ಬದುಕುತ್ತವೆ. ಈ ದೃಷ್ಟಿಯಿಂದ ಕಾದಂಬರಿ ಗಮನಾರ್ಹವಾಗಿದೆ.

ಕಾದಂಬರಿಯು 19ನೇ ಶತಮಾನದ ಕೊನೆಯ ಹಾಗೂ 20 ನೇ ಶತಮಾನದ ಮೊದಲ ಭಾಗದ ಸಾಂಸ್ಕೃತಿಕ ಸಂಘರ್ಷದ ಮುಖಾಮುಖಿಯನ್ನು ನಮ್ಮ ಮುಂದೆ ತೆರೆದಿಡುವ ಮಹತ್ವದ ಚಾರಿತ್ರಿಕ ದಾಖಲೆಯಂತಿದೆ. ವಸಾಹತುಶಾಹಿ ಸಾಮ್ರಾಜ್ಯ ಅನೇಕ ನೆಲೆಗಳಲ್ಲಿ ಬೇರೂರುತ್ತಿರುವ ಚಿತ್ರಗಳು ಕ್ರೈಸ್ತ ಮತದ ಪ್ರಚಾರ ಮತಾಂತರ ಮತ್ತು ಅಂಥ ಪ್ರಕ್ರಿಯೆಗಳಿಗೆ ಎದುರಾಗುವ ಪ್ರತಿರೋಧ ; ಅದೇ ಸಂದರ್ಭದಲ್ಲಿ ಹಿಂದೂ ಧರ್ಮದ ಅಮಾನವೀಯ ಮೌಲ್ಯಗಳನ್ನು ಪ್ರಶ್ನಿಸುತ್ತಾ ಮಾನವೀಯ ಮೌಲ್ಯಗಳಿಗಾಗಿ ನಡೆದ ಹೊಸ ಶೋಧದ ನೆಲೆಗಳು ಆಧುನಿಕ ವೈದ್ಯಕೀಯ ಸೌಲಭ್ಯಗಳು ಈ ಬಗೆಗಿನ ಆಕರ್ಷಣೆ ಮತ್ತು ವಿಕರ್ಷಣೆಗಳು.

ವ್ಯಕ್ತಿ ಸಮಷ್ಟಿ ನೆಲೆಯಲ್ಲಿ ಆಂತರಿಕವಾಗಿಯೂ ಮತ್ತು ಬಾಹ್ಯವಾಗಿಯೂ ಆಗುತ್ತಿರುವ ಬದಲಾವಣೆಗಳು ಪ್ರಾದೇಶಿಕ ಅನನ್ಯತೆಗಳ ಮೇಲೆ ವಸಾಹತುಶಾಹಿ ಆಕ್ರಮಣದ ಮೇಲಿನ ಪ್ರತಿರೋಧ ಹೀಗೆ ಅಸಂಖ್ಯ ಚಿಂತನೆಗಳು ಈ ಕಾದಂಬರಿಯಲ್ಲಿ ಚಿತ್ರಿತವಾಗುತ್ತವೆ. ಕ್ರೈಸ್ತ ಮಿಷನರಿಗಳ ಮತಾಂತರ ಕಾರ್ಯಗಳನ್ನು ಮುಕುಂದಯ್ಯ ತೀವ್ರವಾಗಿ ವಿರೋಧಿಸುವ ಪ್ರಕ್ರಿಯೆಯಲ್ಲಿ ಮತ್ತು ಆ ಕ್ರೈಸ್ತ ಮಿಷನರಿಗಳಿಂದ ಮಲೆನಾಡಿಗೆ ದತ್ತವಾದ ವೈದ್ಯಕೀಯ ಹಾಗೂ ವಿದ್ಯಾಭ್ಯಾಸ ಸೌಲಭ್ಯ ಮೊದಲಾದ ಸೇವಾಕಾರ್ಯಗಳ ಬಗೆಗೆ ಮುಕುಂದಯ್ಯ ತೋರುವ ಶ್ರದ್ಧೆ ಗೌರವಗಳಲ್ಲಿ ವಸಾಹತುಶಾಹಿ ಸಂಸ್ಕೃತಿಯ ಬಗೆಗೆ ಕುವೆಂಪು ಸಂವೇದನೆ ತೋರುವ ಸ್ವೀಕರಣೆ ಮತ್ತು ನಿರಾಕರಣೆ ಅಥವಾ ಪ್ರತಿರೋಧದ ನೆಲೆಗಳನ್ನು ನಿಚ್ಚಳವಾಗಿ ಗುರುತಿಸಬಹುದಾಗಿದೆ.

ಮತಾಂತರ ಪ್ರಕ್ರಿಯೆಯು ಉಪಾಂಗವಾಗಿಯೇ ಭಾರತದಲ್ಲಿ ಇಂಗ್ಲಿಷ್ ಶಿಕ್ಷಣ ಜಾರಿಗೆ ಬಂದಿದ್ದು, ಇಂಗ್ಲಿಷ್ ಕಲಿಸಲು ಪ್ರಾರಂಭಿಸಿದ್ದು ಕ್ರೈಸ್ತ ಧರ್ಮವನ್ನು ಬೋಧಿಸುವ ಪುಸ್ತಕಗಳ ಮೂಲಕವೇ ಇದನ್ನು ಮನಗಂಡ ಮುಕುಂದಯ್ಯನು ಮತಾಂತರವನ್ನು 'ಸಾಮಾಜಿಕ ಜೀವನವನ್ನು ಬುಡಮೇಲು ಮಾಡುವ ಕಾರ್ಯ'ವೆಂದು ತೀವ್ರವಾಗಿ ವಿರೋಧಿಸುತ್ತಾನೆ. ಅದಕ್ಕೆ ಪಾದ್ರಿ ಕ್ರಿಶ್ಚಿಯನ್ ಧರ್ಮದ ಶೋಷಣೆಗಿಂತ ಇಲ್ಲಿನ ಪುರೋಹಿತಶಾಹಿಯ ಶೋಷಣೆಯ ಬಗ್ಗೆ ಬೆಳಕು ಚೆಲ್ಲುವುದನ್ನು ನೋಡಬಹುದು. ಬ್ರಿಟಿಷ್ ಸಾಮ್ರಾಜ್ಯವು ಕಾಡುಹಳ್ಳಿಗಳಿಗೆ ಹೋಗಿ ಶಾಲೆ, ಆಸ್ಪತ್ರೆಗಳನ್ನು ತೆರೆದು ಇಂಗ್ಲಿಷ್ ಶಿಕ್ಷಣ ಪರಿಚಯಿಸಿ ಪುರೋಹಿತಶಾಹಿ ವ್ಯವಸ್ಥೆಯಿಂದ ಬಿಡುಗಡೆಗೊಳ್ಳಲು ಹೊಸ ಎಚ್ಚರ ಉಂಟು ಮಾಡಿದ ಕ್ರೈಸ್ತಪಾದ್ರಿಗಳ ಸೇವಾ ಕಾರ್ಯದ ಬಗೆಗೆ ಕಾದಂಬರಿಕಾರರಿಗೆ ಗೌರವವಿದೆ. ಈ ಮೂಲಕ

ಮಲೆನಾಡಿಗೆ ಬಂದ ಆಧುನಿಕತೆಯ ಪ್ರತೀಕವಾದ ಶಾಲೆಯ ಬಗೆಗೆ ಒಲವು ತೋರುವುದನ್ನು ಉದ್ದಕ್ಕೂ ಕಾಣುತ್ತೇವೆ. ಆಧುನಿಕತೆಯ ಪ್ರತೀಕವಾಧ ಶಾಲೆ ಇಡಿ ಮಲೆನಾಡಿನ ದುರಂತ ಬದುಕಿಗೆ ಪುನಶ್ಚೇತನ ಸುಯೋಗವನ್ನು ತಂದು ಕೊಟ್ಟಿತ್ತೆಂಬ ಆಶಯ ಮದುಮಗಳು ಕಾದಂಬರಿಯಲ್ಲಿ ಗಾಢವಾಗಿದೆ.

ಮಲೆನಾಡಿನ ಎಲ್ಲ ಬಗೆಯ ಕಾರ್ಯಚಟುವಟಿಕೆಗಳಿಗೆ ಕೇಂದ್ರವಾಗಿದ್ದ ಅಂತಕ್ಕನ ಹೋಟೆಲ್ ಮನೆ ಆ ಎಲ್ಲ ಕಾರ್ಯ ಚಟುವಟಿಕೆಗಳ ಪರಿಣಾಮವಾಗಿ ಅವನತಿ ಹೊಂದಿ ಹೊಟ್ಲುಮನೆ ಸ್ಕೂಲ್ ಮನೆ ಎನಿಸಿಕೊಳ್ಳುತ್ತವೆ. ಕಾನೂರು ಹೆಗ್ಗಡಿತಿಯ ಕಥನ ಆರಂಭವಾಗುವುದೆ! ಅಂತಕ್ಕನಂತಹ ಸ್ಕೂಲ್ ಮನೆಯಲ್ಲಿ ಕಲಿತು ಮೈಸೂರು, ಬೆಂಗಳೂರು ನಗರಗಳಿಗೆ ಹೋಗಿ ಹೆಚ್ಚಿನ ವಿದ್ಯಾಭ್ಯಾಸವನ್ನು ಪಡೆದು ಊರಿಗೆ ಮರಳುವ ಯುವಕರ ಭೌತಿಕ ಮತ್ತು ಮಾನಸಿಕ ವಿವರಗಳ ಚಿತ್ರಗಳಿಂದಲೇ ಕಾನೂರು ಹೆಗ್ಗಡಿತಿಯ ಕಾಲಕ್ಕಾಗಲೇ ಮಲೆನಾಡಿನ ಬದುಕು ಆಧುನಿಕತೆಯ ಕಡೆಗೆ ಮುಖ ಮಾಡಿರುವುದನ್ನು ಕಾಣುತ್ತೇವೆ. ಮದುಮಗಳು ಕಾದಂಬರಿಯಲ್ಲಿ ಆಧುನಿಕತೆಯ ಬಗೆಗೆ ವ್ಯಕ್ತವಾಗುವ ಭ್ರಮೆ, ಆತಂಕ, ತಲ್ಲಣ, ವಿಸ್ಮಯಗಳು ಕಾನೂರು ಕಥನದಲ್ಲಿ ಬದುಕಿನ ಭಾಗವೇ ಆಗಿ ಸೇರಿ ಹೋಗುತ್ತದೆ. ಆಧುನಿಕತೆಯ ಲಕ್ಷಣಗಳಾದ ಕ್ರಾಪು, ಕಾಫಿ, ಲಾಟೀನು, ಬೈಸಿಕಲ್ ಇವೆಲ್ಲವು ಬದುಕಿನ ಅನಿವಾರ್ಯ ಅಂಶಗಳಾಗಿ ಪ್ರವೇಶ ಮಾಡಿರುವ ಚಿತ್ರಗಳು ವಿಚಾರಗಳು ಕುವೆಂಪು ಕೃತಿಗಳಲ್ಲಿವೆ.

ಕುವೆಂಪು ಅವರ ಕಾದಂಬರಿಗಳು ಕೇವಲ ಇದಮಿತ್ಥಂ ಕೃತಿಗಳಲ್ಲ. ಬದುಕಿನ ಸಂಕೀರ್ಣತೆಯನ್ನು ಜಟಿಲತೆಯನ್ನು ಅದರ ಎಲ್ಲ ಮಗ್ಗುಲುಗಳನ್ನು ಮರ್ಮಗಳನ್ನು ಅನಾವರಣಗೊಳಿಸುತ್ತಲೇ ಯಾವುದನ್ನು ಸ್ವೀಕರಿಸಬೇಕು ಯಾವುದನ್ನು ತಿರಸ್ಕರಿಸಬೇಕು ಎಂಬುದನ್ನು ಓದುಗರೇ ನಿರ್ಣಯಿಸುವಂತೆ ಪರೋಕ್ಷವಾಗಿ ಅವರನ್ನು ಅಣಿಗೊಳಿಸುವ ಗುಣ ಇವುಗಳಲ್ಲಿ ಸುಪ್ತವಾಗಿ ಇದೆ. ಬದುಕಿನ ಪ್ರೀತಿ, ಜೀವನೋತ್ಸಾಹಗಳನ್ನು ಕಂಡುಕೊಂಡ ಪಾತ್ರಗಳು ಈ ಪ್ರಕ್ರಿಯೆಯಲ್ಲಿ ಲೀನವಾಗಿವೆ. ಪ್ರೀತಿಯ ಗೆಲುವು ಪಾತ್ರದ ಗೆಲುವಾಗಿ ಪರಿಣಮಿಸಿದೆ. ಪ್ರಕೃತಿ ಬದುಕಾಗಿ ಎರಡು ಕಾದಂಬರಿಗಳಲ್ಲಿ ಒಡಮೂಡಿದೆ.

ಕಾದಂಬರಿಗಳ ಅಭಿವ್ಯಕ್ತಿ ಪ್ರಾದೇಶಿಕವಾದುದು ನಿಜ. ಆದರೆ ಅವುಗಳ ವಸ್ತು ಸಾರ್ವತ್ರಿಕವಾದದ್ದು. ಮಲೆನಾಡಿನ ಹಿನ್ನೆಲೆಯಾದರೂ ನೆಲೆ ವಿಶ್ವಜೀವನವನ್ನು ಒಳಗೊಂಡಿರುತ್ತದೆ. ಆದುದರಿಂದ ಈ ಕಾದಂಬರಿಗಳನ್ನು ಯಾವುದೇ ಸೀಮಿತ ಚೌಕಟ್ಟಿನ ಒಳಗಿಟ್ಟು ವಿಶ್ಲೇಷಿಸುವುದು ತರವಲ್ಲ. ಏಕೆಂದರೆ ಕುವೆಂಪು ಅವರ ಬರವಣಿಗೆ ಯಾವುದೇ ಪ್ರಕಾರದ್ದಾದರೂ ಸರಿ, ಅದರಲ್ಲಿ ವಿಶ್ವಪ್ರಜ್ಞೆ ಎರಕಗೊಂಡಿರುತ್ತದೆ.

ಎರಡೂ ಕಾದಂಬರಿಗಳನ್ನು ಬಿಡಿ ಬಿಡಿಯಾಗಿ ಓದಿದಾಗ ಹೂವಯ್ಯ, ಮುಕುಂದಯ್ಯರು ಪರಸ್ಪರ ವಿರುದ್ಧವೆನ್ನಿಸುವ ನೆಲೆಗಳನ್ನು ಪ್ರತಿನಿಧಿಸುವಂತೆ ಕಂಡರೂ ಅವುಗಳನ್ನು ಒಟ್ಟಾಗಿ ಸಮಗ್ರವಾಗಿ ಗುರುತಿಸಿದಾಗ ಹೂವಯ್ಯ ಮುಕುಂದಯ್ಯರು ಕುವೆಂಪು ಮನುಷ್ಯ ಕಲ್ಪನೆಯ ದ್ವಂದ್ವ ವಿನ್ಯಾಸವೊಂದನ್ನು ಸೂಚಿಸುತ್ತಿದ್ದಾರೆ ಎನ್ನಿಸದಿರದು. ಹೂವಯ್ಯನ ಪಾತ್ರ ಕಲ್ಪನೆಯಲ್ಲಿ ಅರಿವಿಗೆ ಒತ್ತುಬಿದ್ದಿದ್ದರೆ ಮುಕುಂದಯ್ಯನ ಪಾತ್ರದಲ್ಲಿ ಇರವಿಗೆ ಒತ್ತು ಇದೆ. ಅಂದರೆ ಒಂದೆಡೆ ಹೂವಯ್ಯನ ಉನ್ನತ ಚಿಂತನೆ,

ಆದರ್ಶಗಳು ಪ್ರತಿನಿತ್ಯದ ಗೃಹಸ್ಥ ಜೀವನದಲ್ಲಿ ಆಗಿಬರುವ ಮತ್ತು ಇನ್ನೊಂದೆಡೆ ಮುಕುಂದಯ್ಯನ ದೈನಿಕದ ಬದುಕು ತನ್ನ ಸೀಮಿತ ಲೌಕಿಕ ಚೌಕಟ್ಟನ್ನೂ ಮೀರಿ ಆಧ್ಯಾತ್ಮಿಕ ಉನ್ನತಿಗೆ ಏರುವ–ಇವೆರಡೂ ಏಕಕಾಲದಲ್ಲಿ ಸಂಭವಿಸಬಹುದಾದ ಒಂದು ಮನುಷ್ಯ ಕಲ್ಪನೆಯನ್ನು ಕುವೆಂಪು ಹೊಳಯಿಸಿಬಿಡುತ್ತಾರೆ.

ಮನುಷ್ಯ ವೈಯಕ್ತಿಕವಾಗಿ ತನ್ನ ಕ್ಷುದ್ರತೆಯನ್ನು ಕಳೆದುಕೊಂಡು ಉನ್ನತನಾಗಬೇಕು. ಹಾಗೆಯೇ ಮನುಷ್ಯ ಸಮಾಜವು ಜಾತಿ, ಮತ, ಕುಲ , ವರ್ಗ, ವರ್ಣ, ಲಿಂಗಬೇಧಗಳನ್ನು ಅಳಿಸಿಹಾಕಿ ಎಲ್ಲ ಜೀವಿಗಳ ಸಹಜ ವಿಕಾಸ ಸಾಧ್ಯವಾಗಬಲ್ಲ ವ್ಯವಸ್ಥೆಯೊಂದು ನಿರ್ಮಾಣವಾಗಬೇಕು ಎಂದು ಲೇಖಕರು ಹಂಬಲಿಸುತ್ತಾರೆ.

ಕುವೆಂಪುರವರನ್ನು ಬೇಂದ್ರೆಯಷ್ಟು ಶ್ರೇಷ್ಠ ಕವಿಯಲ್ಲ, ಅವರು ಶ್ರೇಷ್ಠ ಗದ್ಯಲೇಖಕರು ಮಾತ್ರ ಎನ್ನುವ ವಿಮರ್ಶಾ ಧೋರಣೆಯನ್ನು ಅರ್ಕೆಮಣಿಪಾಲರು ಪ್ರಶ್ನಿಸುತ್ತಾ :

''ಒಬ್ಬ ಲೇಖಕನ ಪ್ರತಿಯೊಂದು ಬರಹವು ಶ್ರೇಷ್ಠವಾಗಲಾರದು. ಒಂದೇ ಗ್ರಂಥದಲ್ಲಿನ ಎಲ್ಲಾ ಪುಟಗಳು ಸಾಲುಗಳು ಸತ್ವಪೂರ್ಣವಾಗಿರಲಾರವು ಎಂದು ಹೇಳುತ್ತಾ ಬೇಂದ್ರೆ , ಅಡಿಗ, ಅನಂತಮೂರ್ತಿ ಕೃತಿಗಳು ಉತ್ಕೃಷ್ಟ ಕಲೆಗಾರಿಕೆಯನ್ನು ತಮ್ಮ ಎಲ್ಲಾ ಕೃತಿಗಳಲ್ಲೂ ಕಾಪಾಡಿಕೊಂಡು ಬರಲು ಹೇಗೆ ಸಾಧ್ಯವಾಗಿಲ್ಲ ಎಂಬುದನ್ನು ಇವರು ಗುರುತಿಸುತ್ತಾರೆ.''[೧]

ಹಾಗೆಯೇ ನವ್ಯವಿಮರ್ಶಕರು ಕುವೆಂಪು ಅವರ ಎರಡು ಕಾದಂಬರಿಗಳು ಅವರ ಕಾವ್ಯಕ್ಕಿಂತ ಮಹತ್ವ ಕೃತಿಗಳೆಂದು ಮಾನ್ಯ ಮಾಡಿದ ಧೋರಣೆಯನ್ನು ಈ ಕೆಳಗಿನಂತೆ ಪ್ರಶ್ನಿಸುತ್ತಾರೆ. ಹಾಗೆಯೇ 'ಕಾನೂರು ಹೆಗ್ಗಡಿತಿ'ಗಿಂತ ನಂತರ ಪ್ರಕಟಗೊಂಡ 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಹೆಚ್ಚು ಶ್ರೇಷ್ಠವೆಂಬ ವಿಮರ್ಶಾ ಸಂವೇದನೆಯನ್ನು ಅರ್ಕೆಮಣಿಪಾಲರು ವಿಶ್ಲೇಷಿಸಿದ್ದಾರೆ.

'ಕಾನೂರು ಹೆಗ್ಗಡಿತಿ'ಗಿಂತ 'ಮಲೆಗಳಲ್ಲಿ ಮದುಮಗಳು' ಹೆಚ್ಚು ಉತ್ತಮವೆಂದು ಇವರೆಲ್ಲಾ ವಾದಿಸುತ್ತಾ ಬಂದಿದ್ದಾರೆ. ಆದರೆ ಅಸಂಖ್ಯ ಸನ್ನಿವೇಶಗಳನ್ನು, ಅಪಾರ ವಿವರಗಳು ಹಿಡಿದಿರುವುದರಿಂದ ಹಾಗೂ ಪಾತ್ರ ಪ್ರಧಾನ ಕಾದಂಬರಿಗಳಿಲ್ಲವಾದುದರಿಂದ ಇವುಗಳಲ್ಲಿ ಕೇಂದ್ರಸ್ಥ ಧೋರಣೆಯಿಲ್ಲವೆಂಬುದು ಈ ವಿಮರ್ಶಕರ ಆಕ್ಷೇಪ. ಈ ಎರಡೂ ಆಕ್ಷೇಪಗಳೂ ಸಮಂಜಸವಾದುದಲ್ಲ, ಪೂರ್ವಾಗ್ರಹಪೀಡಿತ ಟೀಕೆ, ಹೆಗ್ಗಡಿತಿ, ಮದುಮಗಳಷ್ಟೇ ಮಹತ್ವದ ಕೃತಿಯೆಂಬುದಷ್ಟೇ ಅಲ್ಲ, ಒಂದನ್ನು ಇನ್ನೊಂದರ ಜೊತೆಗಿಟ್ಟು ಅಧ್ಯಯನ ಮಾಡುವುದು ಸೂಕ್ತ. ಹೆಗ್ಗಡಿತಿಯಲ್ಲಿ ಬಹುವಾಗಿ ಕೌಟುಂಬಿಕ ವಸ್ತುವೇ ಕೇಂದ್ರವಾಗಿದ್ದರೆ, ಮದುಮಗಳಲ್ಲಿ ಹೆಚ್ಚು ವಿಸ್ತಾರವಾದ ವಿವಿಧ ಸಾಮಾಜಿಕ ಸ್ತರಗಳ ಅನುಭವಗಳ ಮೂಲಕ ಕೌಟುಂಬಿಕ ಸಮಸ್ಯೆಗಳನ್ನು ವಿಶ್ಲೇಷಿಸುವ ಪ್ರಯತ್ನವಿದೆ.

ಮೊದಲನೆಯದರಲ್ಲಿ ವಿಘಟನೆಯ ಚಿತ್ರಣವಿದ್ದರೆ ಎರಡನೆಯದರಲ್ಲಿ ಸಂಘಟನೆಗೆ ಸಹಜವಾಗಿಯೇ ಒತ್ತು ಬಿದ್ದಿದೆ. ವಿಘಟನೆ– ಸಂಘಟನೆಗಳು ಪ್ರತ್ಯೇಕ ಪ್ರತ್ಯೇಕವೆಂದು ಭಾವಿಸದೆ

೧. ಕುವೆಂಪು ಕಥನ –ಡಾ. ಉದ್ದಂಡಯ್ಯ , ಪುಟ –೧೨೬

ಒಂದಕ್ಕೊಂದು ತೆಕ್ಕೆ ಹಾಕಿಕೊಂಡಿರುವ ಒಂದು ಇನ್ನೊಂದಕ್ಕೆ ಪ್ರೇರಣೆಯೊದಗಿಸುವ ಪರಿಯನ್ನು ಕುವೆಂಪು ಇಲ್ಲಿ ಸಮಗ್ರೀಕರಿಸಿದ್ದಾರೆನ್ನಬಹುದು.''[೧]

ಕುವೆಂಪುರವರ ಒಟ್ಟಾರೆ ಜೀವನದರ್ಶನ ವಿವೇಕಾನಂದರು, ಗಾಂಧಿ, ಬುದ್ಧ, ರಾಮಕೃಷ್ಣ ಪರಮಹಂಸರು ಮೊದಲಾದ ಮಹಾನುಭಾವರ ಪ್ರಭಾವವಿರುವುದರಿಂದ ಭಾವನೆಗಳಲ್ಲಿ ವೈಚಾರಿಕ ಚೌಕಟ್ಟನ್ನು ಕಾಣಬಹುದಾಗಿದೆ.

**********

೧. ಕುವೆಂಪು ಜೀವನ ದರ್ಶನ – ಆರ್ಕೆ ಮಣಿಪಾಲ, ಪುಟ–೯೩

# IV. ಕುವೆಂಪು ಕಾದಂಬರಿಗಳ ಭಾಷೆ ಮತ್ತು ಶೈಲಿ

ಆಧುನಿಕ ಕನ್ನಡ ಲೇಖಕರಲ್ಲಿ ಕುವೆಂಪು ಅವರಷ್ಟು ಭಾಷೆಯ ಬಗ್ಗೆ ಚಿಂತನೆಯನ್ನು ವ್ಯಕ್ತಪಡಿಸಿದ ಲೇಖಕರು ಇಲ್ಲವೆನ್ನಬಹುದು. ಕುವೆಂಪು ಅವರು ಕನ್ನಡದ ನಾಡಿಮಿಡಿತ ಬಲ್ಲವರು. ಅದರ ಆಳಅಗಲಗಳಲ್ಲಿ ಮಿಂದವರು. ಅದರ ಅರೆಕೊರೆಗಳನ್ನು ಕಂಡವರು. ಅಂತೆಯೇ ಅದನ್ನು ಸರ್ವಸತ್ವಶಾಲಿಯಾಗಿಸಲು ದುಡಿದವರು.

ಕನ್ನಡದ ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲೂ ಶ್ರೇಷ್ಠವಾದದ್ದನ್ನೇ ರಚಿಸಿದ್ದಾರೆ. ಕನ್ನಡ ಭಾಷೆಯ ಚೌಕಟ್ಟಿಗಷ್ಟೇ ಸೀಮಿತವಾಗುಳಿಯಲಿಲ್ಲ, ಬದಲಾಗಿ ತಮ್ಮ ಪ್ರತಿಭೆಯ ವಿಸ್ತಾರಕ್ಕನುಗುಣವಾಗಿ ಅದರ ಭಿತ್ತಿಯನ್ನು ಬದಲಾಯಿಸಿಕೊಂಡರು. ಅದಕ್ಕೆ ಸಂಸ್ಕೃತದ ಕಾಯಕಲ್ಪ ಮಾಡಿದರು. ಇಂಗ್ಲಿಷ್‌ನ ಜೀವಸತ್ವ ತುಂಬಿದರು. ಭಾರತೀಯ ಭಾಷೆಗಳ ಧಾತುಪುಷ್ಟಿಯನ್ನಿತ್ತರು. ಅದರಿಂದಾಗಿ ಕನ್ನಡ ಸರ್ವಾಂಗ ಸುಂದರವಾಗಿ ಕಂಗೊಳಿಸುವಂತಾಯಿತು.

ಕುವೆಂಪುರವರು ಕಾವ್ಯದಲ್ಲೆಂತೋ ಅಂತೆಯೇ ಕಾದಂಬರಿಯ ರಚನಾ ಕೌಶಲದಲ್ಲಿಯೂ ಕುವೆಂಪು ಅದ್ವಿತೀಯರಾಗಿದ್ದಾರೆ. ಕುವೆಂಪು ಅವರು ರಚಿಸಿದ ಕಾದಂಬರಿಗಳು ಎರಡು ಮಾತ್ರ 'ಕಾನೂರು ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು' ತಮ್ಮ ಬೃಹತ್ ಮತ್ತು ಮಹತ್ವದಿಂದಾಗಿ ಕಾದಂಬರಿಗಳು ಮಂದಿರದ ನಂದಾದೀಪವಾಗಿವೆ.

ಕುವೆಂಪು ಅವರ ಕಾದಂಬರಿಗಳ ಪರಿಧಿಯಲ್ಲಿ ಮಲೆನಾಡಿನ ಜನಜೀವನದ ನಿರೂಪಣೆ ಮಾತ್ರವಲ್ಲದೆ ಇಡೀ ಮಲೆನಾಡಿನ ಚರಾಚರಗಳ ಜಡಚೇತನಗಳ ಕಲೆಯ ಬಲೆಯ ಸಂಗಮ ರೂಪು ತಳೆದಿದೆ. ಇಲ್ಲಿಯ ಪ್ರಾದೇಶಿಕ ಎಲ್ಲೆಯಲ್ಲಿ ಕಾಣಿಸಿಕೊಳ್ಳುವ ಭಾಷೆ, ಪ್ರಕೃತಿ, ಪ್ರಾಣಿಪಕ್ಷಿಗಳು, ಗದ್ದೆ ತೋಟಗಳು, ಜನ ವೈವಿಧ್ಯಮಯ ಪಾತ್ರಗಳು, ಅವುಗಳಲ್ಲಿನ ಜೀವಂತಿಕೆ, ಮಲೆನಾಡಿನ ಪರಿಸರದ ಚಿತ್ರಣ, ವಾಸ್ತವಿಕ ನಿರೂಪಣೆಯ ವಿಧಾನ, ಜನಜೀವನದ ದರ್ಶನ ಭಾಷಾ ವೈವಿಧ್ಯ ಈ ಕಾದಂಬರಿಗಳ ಗುಣವಿಶೇಷಗಳಾಗಿದೆ.

ಕುವೆಂಪು ಅವರ ಕಾದಂಬರಿಗಳಲ್ಲಿ ಮೈದಳೆದಿರುವ ಭಾಷೆ ವೈಶಿಷ್ಟ್ಯಪೂರ್ಣವಾದುದು ಈ ಕಾದಂಬರಿಗಳ ವ್ಯಾಪ್ತಿ, ಗಾಂಭೀರ್ಯಗಳು ಕುವೆಂಪು ಅವರ ಭಾಷೆಯಲ್ಲಿ ಸಮರ್ಪಕವಾಗಿ ರೂಪುಗೊಂಡಿವೆ. ಪ್ರಾದೇಶಿಕ ಭಾಷೆಯನ್ನು ತಮ್ಮ ಕಾದಂಬರಿಗಳಲ್ಲಿ ಹಲವಾರು ಮಂದಿ ಬಳಸಿರುವರಾದರೂ ಅದನ್ನು ಜೀವಂತವಾಗಿ ಬಳಸಿಕೊಂಡು ಸಫಲರಾದವರು ಕೆಲವರು ಮಾತ್ರ. ಆ ಕೆಲವರಲ್ಲಿ ಕುವೆಂಪು ಸಹ ಒಬ್ಬರಾಗಿದ್ದಾರೆ.

ಕುವೆಂಪು ಅವರು ಎರಡೂ ಕಾದಂಬರಿಗಳನ್ನು ಭಾಷೆಯ ದೃಷ್ಟಿಯಿಂದ ತುಲನೆ ಮಾಡಿದಾಗ ತಿಳಿದುಬರುವ ಮುಖ್ಯ ವಿಚಾರಗಳೆಂದರೆ ಕಾನೂರು ಹೆಗ್ಗಡಿತಿಯಲ್ಲಿ ಕುವೆಂಪು ಬಳಸಿರುವ ಭಾಷೆ ಗ್ರಂಥಸ್ಥ ಹಾಗೂ ಸಂಸ್ಕೃತ ಮಿಶ್ರಿತವಾಗಿದೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯ ಭಾಷೆ ಹೆಚ್ಚು ಪ್ರಾದೇಶಿಕವಾಗಿದೆ. ಗ್ರಾಮ್ಯ ಭಾಷೆಯನ್ನು ಕಾದಂಬರಿಕಾರರು ಪಾತ್ರಗಳು ಪ್ರಕೃತಿ, ದೈನಂದಿನ ಘಟನೆಗಳು, ಅನುಭವ, ಆಲೋಚನೆ ಹಾಗೂ ಅನಿಸಿಕೆಗಳು ಇವನ್ನು ಚಿತ್ರಿಸುವಲ್ಲಿ ಅವರು ಗ್ರಂಥಸ್ತ ಭಾಷೆಯನ್ನು ಬಳಸಿಕೊಂಡಿದ್ದಾರೆ.

ಈ ಕಾದಂಬರಿಗಳಲ್ಲಿ ಕಂಡುಬರುವ ಮತ್ತೊಂದು ವೈಶಿಷ್ಟ್ಯವೆಂದರೆ ಭಾಷೆಯ ಬಳಕೆಯಲ್ಲಿ ಕುವೆಂಪು ಅವರಿಗಿರುವ ಔಚಿತ್ಯಪ್ರಜ್ಞೆ. ಇಲ್ಲಿ ಪಾತ್ರಕ್ಕೆ ತಕ್ಕಂತೆ ಅವರು ಭಾಷೆಯನ್ನು ಅಳವಡಿಸಿಕೊಂಡಿದ್ದಾರೆ. ಆದ್ದರಿಂದಲೇ ಕಾದಂಬರಿಯಲ್ಲಿನ ಪಾತ್ರಗಳನ್ನೆಂತೋ ಅಂತೆಯೇ ಭಾಷೆಯನ್ನು ಸಹ ವರ್ಗೀಕರಿಸಬಹುದಾಗಿದೆ. ಈ ದೃಷ್ಟಿಯಿಂದ ಕಾದಂಬರಿಗಳಲ್ಲಿನ ಪಾತ್ರಗಳನ್ನು ಸುಸಂಸ್ಕೃತ ಪಾತ್ರಗಳು, ಅರ್ಧ ಸಂಸ್ಕೃತ ಪಾತ್ರಗಳು ಎಂದೂ ಅವರಾಡುವ ಭಾಷೆಯನ್ನು ನಾಗರಿಕ ಭಾಷೆ ಅರ್ಧ ನಾಗರಿಕ ಭಾಷೆ, ಗ್ರಾಮ್ಯ ಭಾಷೆ ಎಂದೂ ವಿಭಾಗ ಮಾಡಬಹುದು.

ಕಾದಂಬರಿಗಳಲ್ಲಿ ಬರುವ ಗೌಡರು ಹೆಗ್ಗಡೆಗಳು ಸಾಹುಕಾರರು ಸುಸಂಸ್ಕೃತಿಯ ಪ್ರತೀಕವಾದರೆ ಜೀತದಾಳುಗಳ ಅಸಂಸ್ಕೃತಿ ಪರಿಧಿಯಲ್ಲುಳಿಯುತ್ತಾರೆ. ಈ ಎರಡು ಪಂಗಡಗಳ ನಡುವೆ ಹಾಯುವ ಸೇರೆಗಾರರು ಅರ್ಧ ಸಂಸ್ಕೃತಿಯ ಎಡಬಿಡಂಗಿಗಳಾಗಿ ಉಳಿಯುತ್ತಾರೆ. ಅನ್ಯ ಭಾಷೆಗಳಾದ ಸಂಸ್ಕೃತ ಹಾಗೂ ಇಂಗ್ಲಿಷಿನ ಬಳಕೆಯನ್ನು ಈ ಕಾದಂಬರಿಯಲ್ಲಿ ಕಾಣಬಹುದಾಗಿದೆ. ಇಂಗ್ಲಿಷಿನ ಪದಗಳು ಅಲ್ಲಲ್ಲಿ ಕಂಡುಬಂದರೆ ಸಂಸ್ಕೃತ ಪದಗಳು ಹಾಸುಹೊಕ್ಕಾಗಿ ಹೆಣೆದುಕೊಂಡಿದೆ. ಪ್ರಕೃತಿಯ ಕಾವ್ಯಮಯ ವರ್ಣನೆಯಲ್ಲಿ ಮುಖ್ಯ ಪಾತ್ರಗಳನ್ನು ಕಡೆಯುವಾಗ ಭಾವನಾಮಯ ಸನ್ನಿವೇಶಗಳನ್ನು ಚಿತ್ರಿಸುವಾಗ ಕಾದಂಬರಿಕಾರರು ಸಂಸ್ಕೃತ ಪದಗಳನ್ನು ಯಥೇಚ್ಛವಾಗಿ ಬಳಸಿದ್ದಾರೆ.

ಈ ಕಾದಂಬರಿಗಳ ಭಾಷೆ ಅಲ್ಲಲ್ಲಿ ಸಂಸ್ಕೃತ ಭೂಯಿಷ್ಠ ಕನ್ನಡವಾಗಿರುವುದಕ್ಕೆ 'ಕಾನೂರು ಹೆಗ್ಗಡಿತಿ' ಕಾದಂಬರಿಯ 20ನೇ ಅಧ್ಯಾಯದಿಂದ (ಸೀತೆ–ಹೂವಯ್ಯ) ಉದಾಹರಣೆಯಾಗಿ ನಿಲ್ಲುತ್ತಾರೆ. ಸೀತೆ ಹೂವಯ್ಯ ಕೊಟ್ಟ ಒಂದು ಚರಿತ್ರೆಯ ಪುಸ್ತಕದಲ್ಲಿರುವ ಚಿತ್ರಗಳನ್ನು ನೋಡುತ್ತಿರುವಾಗ ಹೂವಯ್ಯ ಕವನ ಸಂಗ್ರಹವೊಂದನ್ನು ಓದುತ್ತಾ ದಿಂಬಿಗೊರಗುತ್ತಾನೆ. ''ಕೆಲವು ಕ್ಷಣಗಳಲ್ಲಿ ಅವನ ಮನಸ್ಸು ಸೀತೆ ಮುತ್ತಳ್ಳಿಗಳನ್ನೆಲ್ಲಾ ಮರೆತು ಕವನಗಳ ಕಲ್ಪನಾ ಜಗತ್ತಿನ ಸೌಂದರ್ಯ ವೈಭವಗಳ ಸ್ವರ್ಗದಲ್ಲಿ ವಿಹರಿಸತೊಡಗಿತು.

ನಗರದ ದ್ರುತಪತ ಸಂಚಾರಮಯವಾದ ಧೂಳೀಧೂಸರ ವಾತಾವರಣದಲ್ಲಿ ಸಪ್ಪೆ ಪ್ರಪಂಚದ ಸಂಸರ್ಗದಲ್ಲಿ ಭಾವಪುಂಜಗಳಾಗಿ ರಂಜಿಸಿದವು. ಕಿಟಕಿಯಲ್ಲಿ ತೂರಿಬಂದ ಪ್ರಾತಃಕಾಲದ ಬಿಸಿಲೂ, ಹೊರಗಡೆ ಮರಗಿಡಗಳಲ್ಲಿ ಇಂಚರಗೈಯುತ್ತಿದ್ದ ಪಿಕಳಾರ ಹಕ್ಕಿಗಳ ಸವಿದನಿಯೂ ಸದಾ ವಿಸ್ಮೃತವಾಗಿದ್ದರೂ ಅವ್ಯಕ್ತಸ್ಮೃತವಾಗಿದ್ದ ಪ್ರೀತಿಯ ಲಲನೆಯೊಬ್ಬಳ ಮಧುರ ಸಾನ್ನಿಧ್ಯವೂ ಅವನ

ಕಲ್ಪನೆಗೆ ರೆಕ್ಕೆ ಬರುವಂತೆ ಮಾಡಿದ್ದವು.'' ಸಂಸ್ಕೃತವನ್ನುಳಿದರೆ ಅಲ್ಲಲ್ಲಿ ಇಂಗ್ಲಿಷ್ ಪದ ಪ್ರಯೋಗಗಳನ್ನು ಕಾಣಬಹುದು. ಕಾನೂರು ಹೆಗ್ಗಡಿತಿಯಲ್ಲಿ 39 ನೇ ಅಧ್ಯಾಯದಲ್ಲಿ ರಾಮಯ್ಯ–ಹೂವಯ್ಯರ ಸಂಭಾಷಣೆಯಲ್ಲಿ ವರ್ಡ್ಸ್‌ವರ್ತ್, ಮ್ಯಾಥ್ಯೂ ಆರ್ನಾಲ್ಡ್ ಎಂಬ ಆಂಗ್ಲ ಭಾಷಾಮಯವಾದ ಸಂಭಾಷಣೆ ನೋಡಬಹುದಾಗಿದೆ.

''ಮಲೆಗಳಲ್ಲಿ ಮದುಮಗಳು'' ಕಾದಂಬರಿಯಲ್ಲಿ ಬರುವ 'ಬೈಸಿಕಲ್' ಎಂಬ ಇಂಗ್ಲಿಷ್ ಪದ ಇಡೀ ಹಳ್ಳಿಯವರ ಕುತೂಹಲಕ್ಕೆ ಪಾತ್ರವಾಗಿ 'ಬೀಸೆಕಲ್ಲು' ಆಗಿ ಪರಿವರ್ತನೆಗೊಂಡು ಕಡೆಗೆ 'ಬೈಸಿಕಲ್ಲು' ಆಗಿ ಉಳಿಯುವುದನ್ನು ಕಾದಂಬರಿ ಓದಿದವರಾರೂ ಮರೆಯಲಾರರು. ಹಾಗೆಯೇ ಬೂಟ್ಸ್, ಕಂಟ್ರಾಕ್ಟ್, ಕ್ರೈಸ್ತ, ಡ್ರೆಸ್ ಮುಂತಾದ ಪದಗಳು ಕೆಳವರ್ಗದವರ ಉಚ್ಚಾರಣೆಗೆ ಸಿಲುಕಿ ಕ್ರಮವಾಗಿ 'ಬೂಟೀಸು' 'ಕಂಟ್ರಾಟು' 'ಕಿಲಿಸ್ತ' 'ಡುರ‍್ಸು' ಗಳಾಗಿ ಪರಿವರ್ತನೆಯಾಗಿರುವುದು ಕಂಡುಬರುತ್ತದೆ.

ಈ ಕಾದಂಬರಿಗಳಲ್ಲಿ ಬರುವ ಎಲ್ಲ ಪಾತ್ರಗಳು ಒಂದೇ ರೀತಿಯಾಗಿ ಕಾಣಿಸಿಕೊಳ್ಳುತ್ತವೆ. ಯಾವುದೂ ಹೆಚ್ಚಲ್ಲ, ಹಾಗೆಯೇ ಯಾವುದೂ ಕಡಿಮೆಯಲ್ಲ. ಕಾದಂಬರಿಕಾರರೇ ಹೇಳುವ ಹಾಗೆ ಎಲ್ಲವೂ ಸಮಾನವಾದುದು, ಮುಖ್ಯವಾದುದು. ಇಲ್ಲಿ ಮನುಷ್ಯನಿಗೆ ಎಷ್ಟು ಪ್ರಾಮುಖ್ಯವೋ ಅಷ್ಟೇ ಸಮನಾದ ಸ್ಥಾನವನ್ನು ಗುತ್ತಿಯ ನಾಯಿ ಹುಲಿಯನಿಗಿದೆ. ಅದೂ ಸಹ ಕಾದಂಬರಿಯಲ್ಲಿ ಪ್ರಮುಖ ಪಾತ್ರ ವಹಿಸಿರುವುದನ್ನು ಗಮನಿಸಬಹುದು. ''ಹುಲಿಯನೂ ಒಡೆಯನಿಗೆ ಸಮೀಪದಲ್ಲಿ ಬೆಚ್ಚಗೆ ಬೆಂಕಿ ಕಾಯಿಸುತ್ತಾ ಅರೆಗಣ್ಣು ಮಾಡಿಕೊಂಡು ನೋಡುತ್ತಾ ಹೊಟ್ಟೆಯಡಿಯಾಗಿ ಮುನ್ನಿಡಿದ ಮುಂಗಾಲುಗಳ ಮೇಲೆ ಮೊರೆಯಿಟ್ಟು ಮಲಗಿಕೊಂಡಿತು''[೧] ಕುವೆಂಪು ಅವರ ಇಂಥ ನಿರೂಪಣೆಯ ಭಾಗದಲ್ಲೂ ಒಂದು ಸಂದರ್ಭವನ್ನು ಭಾಷೆಯ ಮುಖಾಂತರ ಎಷ್ಟು ಸಚಿತ್ರವಾಗಿ ಚಿತ್ರಿಸಬಲ್ಲರು ಎಂಬುದಕ್ಕೆ ಮೇಲಿನ ಹೇಳಿಕೆ ನಿದರ್ಶನವಾಗಿದೆ. ಅನುಪ್ರಾಸ ಎಷ್ಟು ಸಹಜವಾಗಿ ಅಪ್ರಯತ್ನಪೂರ್ವಕವಾಗಿ, ಭಾವಾನುಸಾರಿಯಾಗಿ ಬಂದಿದೆ ಎನ್ನುವುದನ್ನು ಗಮನಿಸಬಹುದು.

ಕಾದಂಬರಿಗಳಲ್ಲಿ ಬರುವ ಸಂಭಾಷಣೆಗಳು ಪಾತ್ರ ಸ್ವಭಾವದ ಜತೆಗೆ ಸಂಬಂಧವನ್ನು ಕಲ್ಪಿಸಿಕೊಳ್ಳುತ್ತದೆ. ಕಾದಂಬರಿಗಳಲ್ಲಿ ಬರುವ ಪಾತ್ರಗಳ ಸಂಭಾಷಣೆಗಳಲ್ಲಿ ಪಾತ್ರನಿಷ್ಠತೆ, ಭಾಷಾಧಿಕೃತತೆ ಬೆರಗು ತರಿಸುತ್ತದೆ. ವ್ಯಕ್ತಿಗಳ ಸಂಭಾಷಣೆಯಲ್ಲಿ ಕಾದಂಬರಿಕಾರರ ನಿರೂಪಣೆಯಲ್ಲಿ ಭಾಷೆಯನ್ನು ಬಳಸಿದಂತೆಯೇ ಅನ್ಯಭಾಷೆಗಳಾದ ಸಂಸ್ಕೃತ ಹಾಗೂ ಇಂಗ್ಲಿಷಿನ ಬಳಕೆಯನ್ನು ಜೊತೆಗೆ ಸಂಸ್ಕೃತಮಿಶ್ರಿತ ಹಳಗನ್ನಡ ಭಾಷೆಯನ್ನು ಹೇಗೆ ಯಾವ ಉದ್ದೇಶಕ್ಕಾಗಿ ಬಳಸಿದ್ದಾರೆಂದು ಗಮನಿಸಬಹುದು.

ಪ್ರಕೃತಿಯ ಕಾವ್ಯಮಯ ವರ್ಣನೆಯಲ್ಲಿ ವ್ಯಂಗ್ಯಕ್ಕಾಗಿ ನಿಗೂಢ ವಿಷಯದ ಅನಾವರಣಕ್ಕಾಗಿ ವಿಶಿಷ್ಟಾನುಭವವನ್ನು ಸ್ವಾರಸ್ಯವಾಗಿ ನಿರೂಪಿಸುವುದಕ್ಕಾಗಿ ಲೈಂಗಿಕ ವರ್ಣನೆಗಾಗಿ ಹಾಗೂ ಮಹತ್ತರವಾದ ಅಭಿವ್ಯಕ್ತಿಗಾಗಿ ಸಂಸ್ಕೃತ ಭೂಯಿಷ್ಠ ಭಾಷೆಯನ್ನು ಬಳಸಿದ್ದಾರೆ. ಉದಾಹರಣೆ ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ 'ಹೂವಯ್ಯನ ಭಾವ ಸಮಾಧಿ' ಎಂಬ ಅಧ್ಯಾಯದಲ್ಲಿ ''ನೋಡುತ್ತಿದ್ದ ಹಾಗೆಯೇ ನೀಲನಿರ್ಮಲವಾಗಿ ಎಲ್ಲಿಯೋ ದೂರದೂರದಲ್ಲಿ ಒಂದೊಂದೆಡೆ ಮಾತ್ರ ಸಣ್ಣ ಸಣ್ಣ

---

೧. ಮಲೆಗಳಲ್ಲಿ ಮದುಮಗಳು –ಕುವೆಂಪು, ಪುಟ ೧೭

ಬೆಳ್ಮುಗಿಲುಗಳಿಂದ ಖಚಿತವಾಗಿದ್ದ ಆಕಾಶದೇಶವು ಸಜೀವವಾಯಿತು. ಆ ಕಿರಿಯ ಬಿಳಿಮುಗಿಲು ತೋಳಗಳ ಹಿಂಡಿನ ಬರುವಿಕೆಯನ್ನು ಕುರಿತು ಭಯಭ್ರಾಂತವಾಗಿ ಮೇವು ಬಿಟ್ಟು ಓಡುವ ಬಿಳಿಯ ಕಂಬಳಿಗುರಿಗಳ ಮಂದೆಯಂತೆ ದಿಕ್ಕುದಿಕ್ಕಿಗೆ ಬೆದರಿ ಬೆದರಿ ಧಾವಿಸಿದವು.

ಅವುಗಳಿಗೆ ಬದಲಾಗಿ ಧೂಮವರ್ಣದ ಧೂಮರೂಪದ ಮಹಾಶಿಲಾಖಂಡಗಳಂತೆ ಮೃದು ಕಠಿಣವಾಗಿದ್ದ ಮುಂಗಾರ್ಗಾಲದ ಕರಿಮುಗಿಲ ಸೇನೆ ಧೀರವಾಗಿ, ಗಂಭೀರವಾಗಿ ಭೀಷಣವಾಗಿ ವೇಗವಾಗಿ ನಭಸ್ಥಲವನ್ನೆಲ್ಲ ಆಕ್ರಮಿಸಿತು. ಗಾಡಿಯ ಹಿಂಭಾಗದಲ್ಲಿ ಕೂತಿದ್ದ ಹೂವಯ್ಯ ಆ ಸೌಂದರ್ಯ ರೌದ್ರಗಳ ಭೀಷಣ ಭವ್ಯತೆಯನ್ನು ನೋಡಿ ಉನ್ಮನಸ್ಕನಾದನು. ಪ್ರಕೃತಿಯ ಆ ಪ್ರಚಂಡ ಶಕ್ತಿಗಳ ತಾಂಡವ ಭೀತಿಯಲ್ಲಿ ಮಾನವನ ಮಹಾದ್ವ್ಯಾಪಾರಗಳೂ ಕೂಡ ಕ್ಷುದ್ರ ಕ್ಷುದ್ರವಾಗಿ ತೋರತೋಡಗಿದವು.''[೧]

''ತೈಲಲಿಪ್ತ, ವಿಭೂತಿಭೂಷಿತ ಕುಂಕುಮಾಂಕಿತೆ ಜಪಾಸು ಶೋಭಿತ ರುದ್ರವೇಷದ ನಾರಿಕೇಳವನಾಂತು ಕೈಯಲ್ಲಿ ನಿಂಗ ಹೊರವಂಟ!''[೨] ಮೇಲಿನ ಮಾತುಗಳಲ್ಲಿ ಸಂಸ್ಕೃತಮಿಶ್ರಿತ ಹಳಗನ್ನಡ ಭಾಷೆಯನ್ನ ಬಳಸಿದ್ದಾರೆ. ಎರಡೂ ಕಾದಂಬರಿಗಳಲ್ಲೂ ಭಿನ್ನ ವಯಸ್ಸಿನ ಭಿನ್ನ ಮನೋಧರ್ಮದ ಭಿನ್ನ ಜಾತಿ ವರ್ಗಗಳ ಪಾತ್ರಗಳು ಸಹಜವಾಗಿ ಬಳಸುವ ಭಾಷಾ ವೈವಿಧ್ಯತೆಗೆ ಸಾಕ್ಷಿಯಾಗಿದೆ. ಈ ಕಾದಂಬರಿಗಳು, ಗ್ರಾಮೀಣ ಜೀವನವನ್ನು ಚಿತ್ರಿಸುವ ಕಾದಂಬರಿಗಳಾದ್ದರಿಂದ ಮನೆಗೊಟ್ಟಿಗೆ, ಅಡಿಗೆಮನೆ, ಕಾಡು, ಬೇಟೆ, ಬೇಸಾಯ, ಹಬ್ಬ–ರೂಢಿ ಸಂಪ್ರದಾಯಗಳು ಮೊದಲಾದ ಸಂಗತಿಗಳು ಕಾದಂಬರಿಗಳುದ್ದಕ್ಕೂ ಬಳಕೆಗೊಂಡಿದೆ. ವಿಷಯ ಯಾವುದೇ ಆಗಿರಲಿ ಅದು ಸಾಹಿತ್ಯಕ್ಕೆ ಮುಖ್ಯವಲ್ಲ, ಅದನ್ನು ರೂಪಿಸುವ ನಿರೂಪಣಾಶೈಲಿ ಬಹುಮುಖ್ಯ.

ಕುವೆಂಪು ಅವರ ಕಾದಂಬರಿಗಳ ಗಾಂಭೀರ್ಯ, ಶಬ್ದ ಸಂಪತ್ತು, ಅರ್ಥಪೂರ್ಣತೆ ರಸಭಾವಗಳನ್ನು ವಿವರವಾಗಿ ತಿಳಿದು ಅನುಭವಿಸುವುದರಿಂದ ಆಗುವ ಆನಂದ ಅಷ್ಟಿಷ್ಟಲ್ಲ. ಭಾಷೆ ಭಾವಗಳ ಸಮರಸ ಸಂಯೋಜನೆಯೇ ಶೈಲಿ. ಚೆಲುವಾದ ಭಾವನೆಯು ಚೆಲುವಾದ ಭಾಷೆಯ ಕೈ ಹಿಡಿದೇ ಬರುತ್ತದೆ. ಶಬ್ದ ಸಂಪತ್ತಿನ ಶಕ್ತಿಯುಳ್ಳ ಲೇಖಕ ತನ್ನ ಭಾವನೆಗಳನ್ನು ನಾನಾ ವಿಧವಾಗಿ ಭಾಷಾ ಹಂದರದಲ್ಲಿ ಹಬ್ಬಿಸಿ ಸಾಹಿತ್ಯಲೋಕವನ್ನೇ ವಿಸ್ಮಯಗೊಳಿಸುತ್ತಾರೆ ಎಂಬ ಮಾತು ಕುವೆಂಪು ಅವರ ಕಾದಂಬರಿಗಳ ವಿಷಯದಲ್ಲಿ ನಿಜವಾಗಿದೆ.

ಈಗಾಗಲೇ ತಿಳಿಸಿದಂತೆ ಕುವೆಂಪು ಪದ ಸಂಪತ್ತಿನಲ್ಲಿ ಸಂಸ್ಕೃತ ಮುಂತಾದವು ಅಪಾರ ಸಂಸ್ಕೃತರ ಮೆರುಗಿನ ತಿಲಕವನ್ನಿಟ್ಟು ಕನ್ನಡಾಂಬೆಯ ವದನಾರವಿಂದವನ್ನು ಕುವೆಂಪು ಶೋಭೆಗೊಳಿಸಿದ್ದಾರೆ: ಸಂಸ್ಕೃತ ಪದಗಳ ನಡೆ, ಗತಿ, ಒಳಗುಟ್ಟು, ಗುಣ ಧರ್ಮಗಳನ್ನೆಲ್ಲ ಅರಗಿಸಿಕೊಂಡು ಆ ಭಾಷೆಯ ಮರ್ಯಾದೆಯನ್ನು ಕನ್ನಡದ ಗೌರವವನ್ನು ಗಮನದಲ್ಲಿಟ್ಟುಕೊಂಡು ಕುವೆಂಪು ಪ್ರಯೋಗವೆಸಗಿದ್ದಾರೆ. ಇದರಿಂದಾಗಿ ಸಂಸ್ಕೃತದ ಹಿರಿಮೆ ಮತ್ತು ಕನ್ನಡದ ಗರಿಮೆ ಎರಡೂ ಸಾಧಿತವಾಗಿದೆ. ಹೀಗೆ ಕುವೆಂಪು ಅವರ ಶೈಲಿಯಲ್ಲಿ ಸಂಸ್ಕೃತದ ಹಾಸು ಕನ್ನಡದ ಬೀಸು ಎರಡೂ ಸಮ್ಮಿಲನಗೊಂಡಿದೆ.

---

೧. ಕಾನೂರು ಹೆಗ್ಗಡಿತಿ – ಪುಟ ೧೯೩

೨. ಮಲೆಗಳಲ್ಲಿ ಮದುಮಗಳು, ಪುಟ ೩೨೬-೩೪೪

ಸಹೃದಯವನ್ನು ಸದಾ ಗಮನದಲ್ಲಿಟ್ಟುಕೊಂಡಿರುತ್ತಿದ್ದ ಕುವೆಂಪು ಅವರು ಮೇಲ್ನೋಟಕ್ಕೆ ವೈದೃಶ್ಯಾರ್ಥಗಳನ್ನು ಬಿಂಬಿಸಿದರೂ ವಸ್ತುಸ್ಥಿತಿಯಲ್ಲಿ ಹೊಸ ಪದವನ್ನು ಹೊಸ ಅರ್ಥದಿಂದ ತುಂಬಿ ಅಣಿಗೊಳಿಸಿಕೊಡುತ್ತಿದ್ದರು. ವಿಶೇಷಣ ವಿಶೇಷ್ಯಗಳನ್ನು ಸೇರಿಸಿ ಒಂದೇ ಪದ ನಿರ್ಮಿಸುವುದರಲ್ಲಿ ಕೂಡ ಕುವೆಂಪು ಸಿದ್ಧಹಸ್ತರು.

ಕುವೆಂಪು ಅವರ ಕಾದಂಬರಿಗಳಲ್ಲಿ ಉಪಮಾ ವೈವಿಧ್ಯವನ್ನು ಕಾಣಬಹುದು. ಮಹೋಪಮೆಯು ಕನ್ನಡಕ್ಕೆ ಮಹತ್ವದ ಕಾಣಿಕೆಯನ್ನು ಸಲ್ಲಿಸಿದೆ. ಕುವೆಂಪುರವರು ಮೊದಲಿಗರಾಗಿದ್ದಾರೆ. ಸಾದೃಶ್ಯ ಲಕ್ಷ್ಮಿಯ ಉಲ್ಲಾಸ ಮೆರೆಯುವಲ್ಲಿ ಉಪಮೆ ವಿಜೃಂಭಿಸುತ್ತಿರುತ್ತದೆಯಷ್ಟೆ. ಶಾಬ್ದಿಕವಾಗಿ ವ್ಯಾಖ್ಯಾನ ಮಾಡಿದಾಗ ಅರ್ಥರಹಿತವೆಂದು ತೋರುವಂಥಾ ಅಭಿವ್ಯಕ್ತಿಗಳು–ಉದಾಹರಣೆಗೆ ''ಇರುಳಿಗೇ ಮೈನವಿರು ನಿಮಿರಿದಂತಾಯಿತು'' (ಕಾ.ಹೆ., ಪು 794) ; ದೀಪದ ಬೆಳಕು ಕೆಂಪಗೆ ಕಾದ ಲೋಹದ ರೇಖೆಯಂತೆ ಗೋಚರಿಸಿತು'' (ಕಾ.ಹೆ, ಪು 795) ಅಥವಾ 'ಗುತ್ತಿಯ ಕಣ್ಣು ಬಾಳೆಯಲೆಯನ್ನು ಬಕಾಸುರನಂತೆ ನೋಡುತ್ತಿತ್ತು'' (ಮ.ಮ, ಪು 20) ಅರ್ಥಪೂರ್ಣವಾಗಿ ತೋರುತ್ತದೆ. ಮಾಹಿತಿ ಮೌಲ್ಯದ ಅಸೊಕ್ತತೆ ಅಥವಾ ಆಯಧಾರ್ಥತೆಗಳು ಪ್ರಭಾವೀ ಸಂಜ್ಞೆಗಳ ಸಂದರ್ಭದಲ್ಲಿ ಸ್ವತಃ ಅಸಂಬದ್ಧವಾಗಿ ಬಿಡುತ್ತವೆ. ಆದ್ದರಿಂದಲೇ ನಾವು ಚಂದ್ರನನ್ನ ''ದೇವರ ಪೆಪ್ಪರಮೆಂಟೀನಮ್ಮ'' ಎಂದು ವರ್ಣಿಸಬಹುದು.

ಭಾವನೆಯ ನೇರವಾದ ಮತ್ತು ಸ್ಫೂರ್ತಿಯುತವಾದ ಅಭಿವ್ಯಕ್ತಿ ಹಾಗೂ ಈ ಸಂಬಂಧವಾದ ನೀರಸ ವರದಿಗಳ ನಡುವಣ ಸುವರ್ಣ ಮಾಧ್ಯಮವೇ ಉಪಮೆ ಎಂದು ಹೇಳಿರುವುದು. ಈ ಅರ್ಥದಲ್ಲಿಯೇ ಆದರೂ ಉಪಮೆಯ ಒಲವು ಸ್ಫೂರ್ತಿಯುತವಾದ ನೇರ ಅಭಿವ್ಯಕ್ತಿಯಲ್ಲೇ ಹೆಚ್ಚಾಗಿದೆ. ಉಪಮೆಗಳು ತಕ್ಷಣದ ಪ್ರಭಾವ ಸಾಮರ್ಥ್ಯದಿಂದಾಗಿ ಹೊಸ ಭಾವನೆಗಳಿಗೆ ಅಥವಾ ಹೊಸ ವಿಚಾರಗಳಿಗೆ ಹೊಸ ಶಬ್ದಗಳನ್ನ ಸೃಷ್ಟಿಸುವ ಅಗತ್ಯವನ್ನು ಬಹುತೇಕವಾಗಿ ಇಲ್ಲವಾಗಿಸುತ್ತದೆ. ಉದಾ:– ಅಸಾಧ್ಯವೆಂಬುದನ್ನು ಸೂಚಿಸಲು ''ಹಸುವಿನ ಕೊಂಬಿನಿಂದ ಹಾಲು ಕರೆ'' (ಮ.ಮ. ಪು 20) ಅತಿಯಾದ ಮದ್ಯಪಾನವನ್ನು ಸೂಚಿಸಲು ''ಕಳ್ಳು ಹೆಂಡ ತುಂಬಿದ ಸರಗೋಲಾಗು'' ಮುಂತಾದ ಕಡೆಗಳಲ್ಲಿ ಉಪಮೆಗಳ ಬಳಕೆಯ ಅನಂತ ಸಾಧ್ಯತೆಗಳನ್ನು ತೋರಿಸಿಕೊಡುತ್ತದೆ. ಅಂತೆಯೇ ರೂಪಕಗಳು ನಮ್ಮ ಶಬ್ದಕೋಶದ ಹೊಸ ಶಬ್ದಗಳೇ ಎಂಬಂತೆ ಆಗಿಬಿಡುತ್ತವೆ. ಉದಾ :– ಧ್ರುವತಾರೆ, ಉತ್ತರಮುಖಿ, ನಡುಗಡಲು (ಮ.ಮ.ಪು 14)

ಭಾಷೆ ಮನುಷ್ಯನನ್ನು ಪ್ರಾಣಿಗಳಿಂದ ಮೇಲೆತ್ತಿರುವ ಅಂಶಗಳಲ್ಲಿ ಒಂದು ಆಡುವ ಮಾತುಗಳನ್ನು ವಿವಿಧ ವಿನ್ಯಾಸಗಳಲ್ಲಿ ಪ್ರಯೋಗಿಸಿ ಸೋಲು ಗೆಲುವುಗಳಲ್ಲಿ ನಲಿದು ನಲಿಸಿ ಬೌದ್ಧಿಕ ಮಾನಸಿಕ ಪ್ರಗತಿಯಲ್ಲಿ ಎಷ್ಟೋ ಮೈಲುಗಲ್ಲುಗಳನ್ನು ನೆಟ್ಟು ಮರದಿಂದ ಬೊಂಬೆ ಮಾಡಿದಾತ ಕುವೆಂಪು ಹಳಗನ್ನಡ ಶಬ್ದವಿರಲಿ ಸಂಸ್ಕೃತವಿರಲಿ ಭಾವದ ಓಟಕ್ಕೆ ಬೇಕಾದಾಗ ಬಳಸಿಕೊಳ್ಳುವುದನ್ನು ಕಾಣುತ್ತೇವೆ. ಒಮ್ಮೆ ಲಲಿತ ಕೋಮಲ ಪದ ವಿನ್ಯಾಸ, ಒಮ್ಮೆ ನುಡಿಕಿಡಿ ಕೂಡಿ ಆರ್ಭಟಿಸುವ ಸಿಡಿಲು ಒಮ್ಮೆ ಜುಳು ಜುಳು ಅಲಾಪಿಸುವ ಪರಿಕಾಲುವೆ ಮತ್ತೊಮ್ಮೆ ತುಂಬು ಹೊಳೆಯ ಛಂದ ಮೊದಲ ಪದ ಮಂತ್ರ ಹಾಕಿ ಕೊನೆ ಪದದೊಡನೆ ಬಿಡುಗಡೆ ಮಾಡುತ್ತದೆ. ಓದುತ್ತ ಹೋದಂತೆ ಚಿತ್ರ ಕಟ್ಟುತ್ತದೆ.

ಕುವೆಂಪು ಅವರ ಸಂಸ್ಕೃತ ಭೂಯಿಷ್ಠವಾದ ಭಾಷೆಗೆ ಕಾರಣ ಬ್ರಾಹ್ಮಣ ಬರಹಗಾರರೊಡನೆಯ ಸ್ಪರ್ಧಾ ಮನೋಭಾವವಲ್ಲ ಅವರ ವಿದ್ವತ್ತೆಂದು ಒಂದು ಕಡೆ ಸ್ಪಷ್ಟಪಡಿಸುತ್ತಾರೆ. ಜನಸಾಮಾನ್ಯರನ್ನು ತಲುಪುವಲ್ಲಿ ಬೇಕಾದ ಸಲಿಲತೆ ಸಾಲದಾಯಿತು ಎನ್ನುವ ಟೀಕೆ ನಿಜ. ನಮ್ಮ ದೇಶದಲ್ಲಿ ಜನಸಾಮಾನ್ಯರೆಂದರೆ ನಿರಕ್ಷರಿಗಳು ತಾನೆ. ಅವರಿಗೆ ಯಾವ ಭಾಷೆಯಾದರೂ ಒಂದೆಯೇ. ಪ್ರಾದೇಶಿಕ ಉಪಭಾಷೆಗಳಲ್ಲಿ ರಚನೆಗೊಂಡ ಕೆಲವು ಕೃತಿಗಳು ವಿದ್ಯಾವಂತರಿಗೂ ಅರ್ಥವಾಗುವುದಿಲ್ಲ.

ಕುವೆಂಪು ವಸ್ತುವಿಗೆ ತಕ್ಕಂತೆ ಸನ್ನಿವೇಶಕ್ಕೆ ತಕ್ಕಂತೆ ಪಾತ್ರಗಳಿಗೆ ತಕ್ಕಂತೆ ಸೂಕ್ತವಾದ ಭಾಷೆಯನ್ನು ಸಮರ್ಥವಾಗಿ ಬಳಸಿದ್ದಾರೆ. ಇದರಿಂದಾಗಿ ಭಾಷೆಯಲ್ಲಿ ವೈವಿಧ್ಯತೆ ಮತ್ತು ಸಂಕೀರ್ಣತೆಗಳು ಸಾಧ್ಯವಾಗಿದೆ. ನಿಜವಾದ ನವ್ಯತೆ ಪರಂಪರಾಗತ ಮೌಲ್ಯಗಳಿಂದ ವಿಭೇದನಗೊಳ್ಳಬೇಕಾಗಿಲ್ಲ. ಬದುಕಿನ ಯಾವುದೋ ಒಂದು ಮುಖಕ್ಕೆ ಸೀಮಿತವಾಗಿ ದುಶ್ಚಟಗಳಿಂದ ವಿಕೃತವಾಗಬೇಕಾಗಿಲ್ಲ ; ಅದು ಸರ್ವಗ್ರಾಹಿ ಇಂಥ ನಿಜವಾದ ನವ್ಯತೆಯನ್ನು ಕಾಣುತ್ತೇವೆ. ಕುವೆಂಪು ಅವರ ಭಾವದಲ್ಲಿ ಭಾಷೆಯಲ್ಲಾಗಲಿ ಕುವೆಂಪು ಸಂಪ್ರದಾಯ ಶರಣರಲ್ಲ. ಅವರು ಕಾಲ ಧರ್ಮದೊಡನೆ ಹೆಜ್ಜೆ ಹಾಕುವ ಕವಿ ಸತತವಾಗಿ ಬೆಳೆಯುತ್ತಾ ಬಂದಿರುವವರು.

ಶೈಲಿ ಶಾಸ್ತ್ರದ ದೃಷ್ಟಿಯಿಂದ ಸಾಹಿತ್ಯ ವಿಶ್ಲೇಷಣೆ ಮಾಡಬೇಕಾದರೆ ಭಾಷಾ ವಿಜ್ಞಾನದ ತಿಳಿವು ಆಳವಾದ ಅಧ್ಯಯನ ಮಾಡಿರಬೇಕು. ಅರ್ಥ ವಿಜ್ಞಾನದ ಅರಿವಿರಬೇಕು. ಈ ಶೈಲಿ ಶಾಸ್ತ್ರ ಏಕೆ ಬೇಕೆಂದರೆ ಒಂದು ಕೃತಿಯ ವಿಭಿನ್ನ ಭಾಗಗಳನ್ನು ಏಕೀಕೃತಗೊಳಿಸುವ ವಿಧಾನ ತಿಳಿದುಕೊಳ್ಳಲು ಶೈಲಿಶಾಸ್ತ್ರ ಅಗತ್ಯವಾಗುತ್ತದೆ ಮತ್ತು ರಸಾನುಭವದ ಪರಿಣಾಮ ತಿಳಿಯಲಿ ಶೈಲಿ ಸಹಾಯವಾಗುತ್ತದೆ. ಒಂದು ಕೃತಿಯ ಶೈಲಿ, ಕವಿಯ ಶೈಲಿ ಎಂದು ಕರೆಯಬಹುದಾಗಿದೆ.

ಪ್ರತಿಯೊಬ್ಬನಿಗೂ ಒಂದು ವ್ಯಕ್ತಿಭಾಷೆ ಇರುತ್ತದೆಂದು ಭಾಷಾ ವಿಜ್ಞಾನ ಹೇಳುತ್ತದೆ. ಅದರಂತೆ ಪ್ರತಿಯೊಬ್ಬ ಲೇಖಕನಿಗೂ ಒಂದೇ ವ್ಯಕ್ತಿಶೈಲಿ ಇರುವುದು ಸಹಜ. ವ್ಯಕ್ತಿ ಭಾಷೆಗಳು ತಮ್ಮ ಲಕ್ಷಣಗಳಿಗನುಗುಣವಾಗಿ ಹೊಂದಿಕೊಂಡು ಉಪಭಾಷೆಗಳಾಗುವಂತೆ ಜವರೇಗೌಡರು ಉಪಶೈಲಿಗಳನ್ನು ಸ್ಥಾಪಿಸಿದ್ದಾರೆ.

ಶೈಲಿ ಶಬ್ದಕ್ಕೆ ಮೂರು ವಿಭಿನ್ನಾರ್ಥಗಳಿವೆ ; ವೈಯಕ್ತಿಕ , ವೈಶಿಷ್ಟ್ಯವಾಗಿ ಶೈಲಿ, ಪ್ರತಿಪಾದನೆಯ ತಂತ್ರವಾಗಿ ಶೈಲಿ, ಸಾಹಿತ್ಯದ ಅತ್ಯುನ್ನತ ಸಾಧನೆಯಾಗಿ ಶೈಲಿ, ಒಂದು ಶೈಲಿ ವೈಯಕ್ತಿಕವಾಗಿರಲೇಬೇಕು. ಏಕೆಂದರೆ ಅದು ಒಂದು ವೈಯಕ್ತಿಕ ಅನುಭವ ನೇರ ಅಭಿವ್ಯಕ್ತಿ ಸಾಹಿತ್ಯಾಕೃತಿಯನ್ನು ನಿಜವಾಗಿ ಗ್ರಹಿಸಿದಾಗ ಮಾತ್ರವೇ ಅದರ ಶೈಲಿಯ ಬಗೆಗೆ ಇತ್ಯಾತ್ಮಕವಾಗಿ ಘೋಷಣೆ ಮಾಡುವುದು ಸಾಧ್ಯ. ಎಲ್ಲ ಶೈಲಿ ಶಬ್ದದ ಎರಡರ್ಥಗಳೂ ಮಿಲನಗೊಳ್ಳುತ್ತದೆ. ಅದೇ ಉನ್ನತ ಶೈಲಿ. ಅದು ಪರಮಾವಧಿ ವ್ಯಕ್ತಿತ್ವದೊಡನೆ ಪರಮಾವಧಿ ವ್ಯಕ್ತಿತ್ವ ಸಾಹಿತ್ಯದ ಸಂಯೋಗ. ಶೈಲಿ ಭಾಷೆಯ ಒಂದು ಗುಣ ಲೇಖಕನಿಗೆ ವಿಶಿಷ್ಟವಾದ ಭಾವಗಳನ್ನು ಅಥವಾ ಆಲೋಚನೆಗಳನ್ನು ಅಥವಾ ಒಂದು ಭಾವವ್ಯೂಹವನ್ನು ಖಚಿತವಾಗಿ ಸಂವಹನಗೊಳಿಸುವಂಥದು. ಆಲೋಚನೆ ಪ್ರಧಾನವಾದ ಕಡೆ ಅಭಿವ್ಯಕ್ತಿ ಗದ್ಯದಲ್ಲಿರುತ್ತವೆ.

ನ್ಯೂಮನ್ ಶೈಲಿಯು ಲೇಖಕನ ಛಾಯೆ ಎನ್ನುತ್ತಾರೆ. ಕುವೆಂಪು ಶೈಲಿ ಎಂದರೆ Style is that by which one personality moves another ಎಂದು ಹೇಳಿದ್ದಾರೆ.

ಬ್ರಾಹ್ಮಣಶಾಹಿ ದಬ್ಬಾಳಿಕೆಯನ್ನು ಪ್ರತಿಭಟಿಸಿದ ಕವಿ ಕುವೆಂಪು ತಾವೇನೂ ಅವರಿಗಿಂತ ಕಡಿಮೆ ಇಲ್ಲ ಎಂಬಂತೆ ಹಳೆಯ ಪುರಾಣ ವಸ್ತುವನ್ನೇ ತಮ್ಮ ಕಾವ್ಯಕ್ಕೆ ನಾಟಕಕ್ಕೆ ಬಳಸಿಕೊಂಡದ್ದಲ್ಲದೆ ವಸ್ತುವಿಗೆ ತಕ್ಕ ಶೈಲಿ, ಭಾಷೆ. ಅವರ ಭಾಷೆ ಶೈಲಿಗಳೂ ಸಂಸ್ಕೃತ ಭೂಯಿಷ್ಠವಾದವು. ಅವರ ಭಾಷೆ ಶೈಲಿಗಳು ಎಷ್ಟರಮಟ್ಟಿಗೆ ಸಂಸ್ಕೃತಮಯವಾಗಿದೆ ಎಂದರೆ ಕಾನೂರು ಹೆಗ್ಗಡಿತಿ ಮತ್ತು ಮಲೆಗಳಲ್ಲಿ ಮದುಮಗಳು ಮುಂತಾದ ಕಾದಂಬರಿಗಳಲ್ಲಿಯೇ ಸಂಭಾಷಣಾ ಭಾಗಗಳನ್ನು ಉಳಿದ ಸಣ್ಣ ವಿವರಗಳೂ ಕೆಲವು ಕಡೆ ಅತಿ ಸಂಸ್ಕೃತಮಯವಾಗಿ ಸಾಮಾನ್ಯ ಓದುಗನಿಗೆ ಅರ್ಥವಾಗದೆ ಹೋಗುತ್ತದೆ ಎಂಬುದು ವಸ್ತುನಿಷ್ಠ ಸತ್ಯವಾಗಿದೆ. ಇದಕ್ಕೆ ಕುವೆಂಪು ಅವರನ್ನೇ ಕೇಳಿದರೂ ಎರಡಿಲ್ಲದೆ ಉತ್ತರಿಸಿಯಾರು : ಶೂದ್ರ ಕವಿಯೊಬ್ಬ ಹೀಗಾಗಲು ಕಾರಣ ಆ ಕಾಲದ ಬ್ರಾಹ್ಮಣಶಾಹಿ ಭಾಷೆ, ಶೈಲಿಗೆ ಸವಾಲು ಒಡ್ಡುವಂತೆ ಮಾಡಬಹುದಾಗಿತ್ತು. ಅವರ ಕಾದಂಬರಿಗಳಲ್ಲಿನ ದೇಶಿಯತೆಯನ್ನು ಮರೆಯುತ್ತಾರಾದರೂ ಅವರು ಸೃಷ್ಟಿಸಿದ ಒಟ್ಟು ಸಾಹಿತ್ಯದ ಮೊತ್ತದಲ್ಲಿ ಅದು ಗಣನೆಗೆ ಬಾರದೆ ಹೋಗುತ್ತದೆ.

ಆದ್ದರಿಂದ ಕುವೆಂಪು ಭಾಷೆ ಶೈಲಿ ಸಂಸ್ಕೃತಮಯ ಎಂದು ಆರೋಪ ಮಾಡುವವರು ಈಗ ಅಂಶವನ್ನು ಮರೆಯಬಾರದು. ಹೀಗಾಗಿ ಬ್ರಾಹ್ಮಣಶಾಹಿ ಕಾವ್ಯ ರಚನಾ ವಿಧಾನವನ್ನು ಛಾಲೆಂಜ್ ಮಾಡುವ ಭರದಲ್ಲಿ ಕುವೆಂಪು ದೇಶೀಯ ಭಾಷಾ ಸಂವೇದನೆಯಿಂದ ವಂಚಿತರಾಗಬೇಕಾಯಿತು. ಬ್ರಾಹ್ಮಣಶಾಹಿಯನ್ನ ಪ್ರತಿಭಟಿಸುವ ಭರದಲ್ಲಿ ಕುವೆಂಪು ಅವರಿಗೆ ಶೂದ್ರರಿಗಿಂತ ಕೆಳವರ್ಗದ ಜನ ಕಾಣದೇ ಹೋದರು.

ಕಾದಂಬರಿಯ ಶೈಲಿಯು ಕೂಡ ಹೂವಯ್ಯನಿಗೆ ಸಂಬಂಧಿಸಿ ಮತ್ತು ಪ್ರಕೃತಿಗೆ ಸಂಬಂಧಿಸಿ ಭಿನ್ನವಾಗುತ್ತವೆ. ಗ್ರಾಂಥಿಕವೂ, ಕಾವ್ಯಮಯವೂ ಆಗುತ್ತವೆ. ಈ ಪ್ರವಾಹಗಳು ಬೇರೆಯಾಗಿ ಉಳಿದು ಕಾದಂಬರಿಯ ಬಂಧವು ಶೀಲಗೊಂಡಂತೆ ಕಾಣುತ್ತದೆ. ವಸ್ತುವಿನಲ್ಲಿ ದೊಡ್ಡ ಬಿರುಕು ಕಂಡಂತಾಗುತ್ತದೆ. ಕುವೆಂಪು ಕಾದಂಬರಿಗೆ ಹಿಂದಿದ್ದ ಕನ್ನಡ ಗದ್ಯದ ಶೈಲಿ ಸಂಪ್ರದಾಯವೆಂದರೆ ವೆಂಕಟಾಚಾರ್ಯ – ಗಳಗನಾಥರದು – ವಿಶೇಷವಾಗಿ ಪಶ್ಚಿಮದ ವಾಸ್ತವಗದ್ಯವನ್ನು ಕಂಡು ಆಸೆ ಅಶಂಕೆಗಳಿಂದ ಅಸ್ಥಿರತೆಯಲ್ಲಿಯೇ ಕಂಪನೋದ್ದೀಪ್ತಗೊಂಡಿದ್ದ ಶೈಲಿ ಅದು. ಕನ್ನಡ ಶೈಲಿ ವ್ಯಾಪಕವಾಗಿರುವಂಥದು. ಕುವೆಂಪು ಪಾಶ್ಚಾತ್ಯ ಸಾಹಿತ್ಯ ತಂತ್ರಗಳನ್ನು ಬೇಕಷ್ಟು ಬಳಸುತ್ತಾರಾದರೂ ಮೂಲತಃ ಅವರ ಸಾಹಿತ್ಯವು ನಮ್ಮದೇ ಪರಂಪರೆಯ ತಾತ್ವಿಕದೃಷ್ಟಿ. ಕುವೆಂಪು ಅವರು ಪಶ್ಚಿಮದಿಂದ 'ವಾಸ್ತವವಾದ' ವೆಂಬುದನ್ನು ತಮ್ಮ ಸಾಹಿತ್ಯದ ಒಂದು ಅಂಶವಾಗಿ ಸ್ವೀಕರಿಸಿದರು. ಮಲೆಗಳಲ್ಲಿ ಮದುಮಗಳು ಕಾದಂಬರಿಯ ಶೈಲಿ ಆಧುನಿಕ ವಾಸ್ತವ ಕಾದಂಬರಿ ಮತ್ತು ಬಾಣಭಟ್ಟನ ಕಾದಂಬರಿಗಳೆರಡರ ಹೊಸ ಪಾಕವೆನ್ನುವ ಆಗಿದೆ.

ಕಾದಂಬರಿಯಲ್ಲಿ ಬರುವ ಪ್ರತಿಯೊಂದು ವ್ಯಕ್ತಿಯನ್ನು ಒಮ್ಮಿಲ್ಲೊಮ್ಮೆ ಸೂಕ್ಷ್ಮವಾಗಿಯಾದರೂ ಸ್ಫುಟವಾಗಿ ಕಣ್ಣಿಗೆ ಕಟ್ಟುವಂತೆ ಕಡೆದಿದ್ದಾರೆ. ಈ ವ್ಯಕ್ತಿಗಳ ವೈವಿಧ್ಯತೆ ಜೀವನದ ವೈವಿಧ್ಯತೆಯನ್ನೇ

ಹೋಲುತ್ತದೆ. ವಾಸರನ ಕಥೆಗಳನ್ನು ಕುರಿತು ಡ್ರೈಡನ್ ವಿಮರ್ಶಿಸಿದಾಗ ''ಇಲ್ಲಿದೆ ಸೃಷ್ಟಿಕರ್ತನ ಸಮೃದ್ಧಿ ; ಆ ಮಾತು ಕುವೆಂಪುರವರ ಕಾದಂಬರಿಯ ವಿಷಯದಲ್ಲಿ ಹೇಳಿದರೆ ಉತ್ಪ್ರೇಕ್ಷೆ ಆಗಲಾರದು.''[೧]

ಈ ವೈವಿಧ್ಯತೆ ಈ ಶಬ್ದಚಿತ್ರದ ಸೊಗಸು ಬರಿಯ ವ್ಯಕ್ತಿಗಳೇ ಮೀಸಲಾಗಿಲ್ಲ. ಕಾದಂಬರಿಯಲ್ಲಿ ಬರುವ ಅನೇಕ ಕ್ರಿಯೆಗಳನ್ನೂ, ಸನ್ನಿವೇಶಗಳನ್ನೂ, ಸ್ಥಳಗಳನ್ನೂ ಇದೇ ರೀತಿಯ ವಾಸ್ತವಿಕತೆಯಿಂದ ಕಣ್ಣಿಗೆ ಕಟ್ಟುವಷ್ಟು ಸಹಜವಾಗಿ ಚಿತ್ರಿಸಿದ್ದಾರೆ.

ಕಾನೂರು ಹೆಗ್ಗಡಿತಿಯಲ್ಲಿ ನಿಸರ್ಗ ವರ್ಣನೆಗೆ ಒಂದು ವಿಶಿಷ್ಟ ಸ್ಥಾನವನ್ನು ಕೊಟ್ಟಿದ್ದಾರೆ. ಅವರ ಇತರ ಕೃತಿಗಳಿಗಿಂತಲೂ ಹೆಚ್ಚಾಗಿ ಪ್ರಕೃತಿ ವರ್ಣನೆ ಕಾದಂಬರಿಯಲ್ಲಿ ಕಂಡುಬರುತ್ತದೆ. ನಿಸರ್ಗ ಕಥೆಗೆ ಹಿನ್ನೆಲೆಯಾಗಿ ಬರುವುದು ಮಾತ್ರವಲ್ಲದೆ ಸನ್ನಿವೇಶ, ಘಟನೆ ಪಾತ್ರಗಳಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದೆ. ಪಾತ್ರಗಳ ಗುಣ ಸ್ವಭಾವಗಳಿಗೂ ಏಳುಬೀಳಿಗೂ ನಿಸರ್ಗ ಕಾರಣವಾಗಿದೆ. ಅನೇಕ ಚೇತೋಹಾರಿಯಾದ ಪ್ರಕೃತಿ ದೃಶ್ಯಗಳನ್ನು ಮನಮುಟ್ಟುವಂತೆ ಅಪೂರ್ವ ರೀತಿಯಲ್ಲಿ ಬಣ್ಣಿಸಿದ್ದಾರೆ. ಅತಿ ಸೂಕ್ಷ್ಮ ಚಿತ್ರಗಳನ್ನು ಕೂಡ ಚಿತ್ರಿಸಿದ್ದಾರೆ.

ಕನ್ನಡ ಕಾದಂಬರಿಯ ವಸ್ತು ಮತ್ತು ತಂತ್ರಗಳನ್ನು ಬಹಳಷ್ಟು ಮಂದಿ ಚರ್ಚಿಸಿದ್ದಾರೆ. ಇಂಥ ಬಹುತೇಕ ಚರ್ಚೆಗಳಲ್ಲಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವಲಯದಲ್ಲೇ ನಡೆದಿರುವುದರಿಂದ ಕುವೆಂಪು ಕಾದಂಬರಿಗಳ ಅನನ್ಯವಾದ ವಸ್ತುವಿನ್ಯಾಸಗಳು ಅಗೋಚರವಾಗಿಯೇ ಉಳಿದುಬಿಟ್ಟಿವೆ. ಕಾನೂರು ಹೆಗ್ಗಡಿತಿ 'ಕಡಗೋಲ ಕಂಬದ ಸಾಕ್ಷಿಪ್ರಜ್ಞೆಯಲ್ಲಿ ಹುಟ್ಟಿದರೆ, ಮಲೆಗಳಲ್ಲಿ ಮದುಮಗಳು 'ಮಸೆಕಲ್ಲಿನ ಸಾಕ್ಷಿ ಪ್ರಜ್ಞೆಯಲ್ಲಿ ಹುಟ್ಟಿದೆ. ಒಂದು ಕಾದಂಬರಿ ಮಲೆನಾಡಿನ ಬಾಳನ್ನು ನಿಷ್ಠುರವಾಗಿ ಮಥಿಸಿ ಪಡೆದ ನವನೀತವಾಗಿದ್ದರೆ, ಮತ್ತೊಂದು ಕಾದಂಬರಿ ಮಲೆನಾಡಿನ ಬಾಳನ್ನು ಏಕಾಗ್ರವಾಗಿ ಮಸೆದು ತೆಗೆದ ಹರಿತವಾದ ಅಲಗಾಗಿದೆ. ಬಹುಶಃ ಈ ಕಾರಣದಿಂದಾಗಿಯೇ ಪ್ರತಿಭಟನೆಯನ್ನೇ ಏಕಮೇವ ಮಾನದಂಡವನ್ನಾಗಿ ಮಾಡಿಕೊಂಡ ತೋಪು ಪ್ರಜ್ಞೆಯ ವಿಮರ್ಶಕರಿಗೆ ಕಾಕಾನೂರು ಹೆಗ್ಗಡಿತಿಗಿಂತಲೂ ಮಲೆಗಳಲ್ಲಿ ಮದುಮಗಳುವಿನಲ್ಲಿ ಹೆಚ್ಚು ಪ್ರತಿಭಟನೆ ಕಂಡಿದೆ. ಶ್ರಮ ಸಂಸ್ಕೃತಿಗೆ ಸೇರಿದ ಕಡಗೋಲು ಮತ್ತು ಮಸೆ ಕಲ್ಲುಗಳನ್ನು ಕುವೆಂಪು ತಮ್ಮ ಕಾದಂಬರಿಗಳ ಸಾಕ್ಷಿಪ್ರಜ್ಞೆಯನ್ನಾಗಿಸಿದ್ದಾರೆ. ಈ ಕಡಗೋಲಿಗೆ ಮಸೆಕಲ್ಲಿಗೆ ಜಾತಿಮತಗಳಿಲ್ಲ, ತಾರತಮ್ಯವಿಲ್ಲ, ಯಾವ ಪಕ್ಷಪಾತವಿಲ್ಲ. ಕಡಗೋಲು ಕಂಬ ಮತ್ತು ಮಸೆಕಲ್ಲು ಬಗ್ಗೆ ಕುವೆಂಪು ನುಡಿಗಳಿವು :

ಕಡಗೋಲು ಕಂಬ !'' ಮೂರಡಿಯ ಉತ್ತರದ ಕಡಗೋಲು ಕಂಬವು ಶತಮಾನಗಳಿಗೆ ಸಾಕ್ಷಿಯಾಗಿ ನಿಂತಿತ್ತು, ಎಷ್ಟು ಜನ ಹೆಣ್ಣುಗಳು ಅದರ ಮುಂದೆ ಕುಳಿತು ಪ್ರಾತಃಕಾಲದಲ್ಲಿ ಮೊಸರು ಕಡೆದಿದ್ದಾರೆ! ಅದಕ್ಕೆ ಎಷ್ಟು ಕೋಮಲ ಕರಗಳ ಸ್ಪರ್ಶವಾಗಿದೆ ; ಎಷ್ಟು ಕಂಠಗಳು ಎಷ್ಟು ರೂಪಗಳು, ಎಷ್ಟು ವಿಧವಾದ ಸಂಭಾಷಣೆಗಳು, ಎಷ್ಟು ಕ್ಷುದ್ರ ಕಲಹಗಳು ಅದಕ್ಕೆ ತಿಳಿದಿವೆ ! ವಾಸುವಿನ ತಾಯಿ, ಚಂದ್ರಯ್ಯಗೌಡರ ತಾಯಿ, ಅವರ ಅಜ್ಜನ ತಾಯಿ, ಅವರ ಅಜ್ಜನಜ್ಜನಜ್ಜನ ತಾಯಿ ಎಲ್ಲರೂ ಪರಿಚಿತರು ಆ ಕಡಗೋಲು ಕಂಬಕ್ಕೆ! ಆ ಕಡಗೋಲು ಕಂಬಕ್ಕೆ ಎಲ್ಲಿಯಾದರೂ ಮಾತಾಡುವ ಶಕ್ತಿ

---

೧. ಸಾಹಿತ್ಯಾರಾಧನೆ – ದೇಜಗೌ – ಪುಟ –೭೬

ಬಂದರೆ ಎಷ್ಟು ಗುಟ್ಟುಗಳು ರಟ್ಟಾಗಿ ಹೋಗುತ್ತವೆ! ಎಷ್ಟು ಸ್ನೇಹ ಪ್ರೇಮಗಳು ನುಚ್ಚು ನೂರಾಗಿ ಮಣ್ಣುಗೂಡುತ್ತವೆ! ಎಷ್ಟು ದ್ವೇಷ ಮಾತ್ಸರ್ಯಗಳು ಹಾಳಾಗಿ ಮತ್ತೆ ಸ್ನೇಹ ಶಾಂತಿಗಳು ಮೂಡುತ್ತವೆ. ಅದಕ್ಕೆಲ್ಲಿಯಾದರೂ ಬಾಯಿ ಬಂದರೆ ದೇವರೇ ಗತಿ! ರಾಮಾಯಣ ಮಹಾಭಾರತಗಳಿಗಿಂತಲೂ ದೊಡ್ಡಪುರಾಣವಾಗಿ ಹೋಗುತ್ತದೆ! ''ಅಯ್ಯೋ ನಾವು ರಾಮ, ಸೀತೆ, ಹನುಮಂತ, ರಾವಣ, ಪಂಚ ಪಾಂಡವರು, ಕೃಷ್ಣ, ಕೌರವ, ದ್ರೌಪದಿ, ಇವರುಗಳ ಕಥೆಯೇ ಹೆಚ್ಚೆಂದು ತಿಳಿದಿದ್ದೆವಲ್ಲಾ! ಎಂದು ವಾಲ್ಮೀಕಿ ವ್ಯಾಸದಿ ಕವಿವರ್ಯರೂ ನಾಚಿ ತಲೆಬಾಗಬೇಕಾಗುತ್ತದೆ. ಸದ್ಯಕ್ಕೆ ಅದಕ್ಕೆ ಬಾಯಿಲ್ಲ; ಅಥವಾ ಇದ್ದರೂ ಇಲ್ಲದವರಂತೆ ನಟಿಸುತ್ತಿದೆ.

ಆದ್ದರಿಂದ ಅವರೆಲ್ಲರೂ ಬದುಕಿಕೊಂಡಿದ್ದಾರೆ! (ಕಾನೂರು ಹೆಗ್ಗಡಿತಿ) ಮಸೆಕಲ್ಲು(ಸುಬ್ಬಣ್ಣ ಹೆಗ್ಗಡೆಯವರು ಐಗಳಿಗೆ) ಒಂದು ಕಾಡು ಕಲ್ಲನ್ನು ತೋರಿಸಿ ''ಇದನ್ನೇ ನೋಡಿ ಮಸೆಕಲ್ಲು ಅಂತಾರೆ, ನೂರಾರು ವರ್ಷಗಳಿಂದ ಸಾವಿರಾರು ಜನರ ಕತ್ತಿ ಮಸೆದೂ ಮಸೆದೂ ಹ್ಯಾಂಗೆ ನುಣ್ಣಾಗ್ಯದೆ ನೋಡಿ! ಸಿಕಾರಿಗೆ ಹೋಗೋರು ಮರ ಕಡಿಯೋಕೆ ಹೋಗೋರು, ಬಗನಿ ಇಳಿಸಾಕೆ ಹೋಗೋರು, ಸೊಪ್ಪು ಸೌದೆಗೆ ಹೋಗೋರು ಎಲ್ಲಾರು ನಮ್ಮ ಅಪ್ಪ, ಅಜ್ಜ, ಮುತ್ತಜ್ಜನ ಕಾಲದೋರು ಎಲ್ರೂ ಕತ್ತಿ ಮಸೆದಿದ್ದಾರೆ ಇಲ್ಲಿ ನಾನೂ ಮಸೆದಿದ್ದೆ; ನಮ್ಮ ದೊಡ್ಡಣ್ಣನೂ ಮಸೆದಿದ್ದ; ನಾವೆಲ್ಲ ಹೋಗ್ತೀವಿ, ಈ ಕಲ್ಲು ಮಾತ್ರ ನಮ್ಮ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಗಿರಿಮಕ್ಕಳು ಎಲ್ಲರ ಕಾಲಾನೂ ನೋಡ್ತಾ ಇಲ್ಲೇ ಹೀಂಗೇ ಕೂತಿರ್ತಿನೆ! ಹ್ಹಿ... ಹ್ಹಿ... ಹ್ಹಿ... ಎಂದು ಸಿಂಬಳ ಸುರಿದು ಕಣ್ಣೊರಸಿಕೊಂಡರು.'' (ಮ.ಮ)

ಕಡಗೋಲು ಕಂಬದ ಸಾಕ್ಷಿಯಲ್ಲ, ಮಸೆಕಲ್ಲು ಘಟನಾ ಪರಂಪರೆ ಘಟನಾವ್ಯೂಹ, ಘಟನಾಗರ್ಭಿತ ಪ್ರಸಂಘ, ಪ್ರಾಕೃತ ಸಮೃದ್ಧಿ ಪ್ರಾಕೃತಿಕ ರೂಕ್ಷದಾ ರಮಣೀಯತೆ, ಅರಣ್ಯಕ ಪ್ರಪಂಚ, ಗ್ರಾಮೀಣತಾರುಚಿ, ಗ್ರಾಮ್ಯ ಭಾಷಾ ಪ್ರಜ್ಞೆ, ಪ್ರಯೋಗಿಸಿರುವ ಪದಗಳು, ಕಾದಂಬರಿಯ ವಸ್ತು ವಿನ್ಯಾಸ ಜೀವನ ದರ್ಶನಗಳನ್ನು ಗ್ರಹಿಸಲು ನೆರವಾಗುವ ಮಾರ್ಗಸೂಚಿಗಳೂ ಆಗಿವೆ.

ವಸ್ತು ಮತ್ತು ತಂತ್ರಗಳು ಅಭಿನ್ನವಾಗಿ ತೋರಿ ಬರುವಂತೆ ಕೃತಿಯನ್ನು ಸೃಜಿಸುವುದೇ ಕಾದಂಬರಿಕಾರನ ನೈಜ ಕಲೆಗಾರಿಕೆ. ಈ ದೃಷ್ಟಿಯಿಂದ 'ಮಲೆಗಳಲ್ಲಿ ಮದುಮಗಳು' ಅಭ್ಯಾಸಯೋಗ್ಯ ಮಹತ್ವದ ಕೃತಿಯಾಗಿದೆ.

ಮಲೆನಾಡಿನ ವರ್ಣರಂಜಿತ ಪರಿಸರದ ಏಳೆಂಟು ಹಳ್ಳಿಗಳ ಮನೆತನಗಳ ವ್ಯಕ್ತಿಗಳ ಆಸೆ-ಆಕಾಂಕ್ಷೆಗಳನ್ನು, ಹತಾಶೆ-ನಿರಾಶೆಗಳನ್ನು, ಸೋಲು-ಗೆಲವುಗಳನ್ನು, ಪರಸ್ಪರ ಸಂಘರ್ಷಗಳನ್ನು ಚಿತ್ರವತ್ತಾಗಿಸುವ ಕಾದಂಬರಿ ತನ್ನ ತೋಳಬೀಸಿನಲ್ಲಿ ತೆಕ್ಕೆಗೆ ಹಿಡಿದಿವೆ. ಒಂದು ಘಟನೆಯ ನೆರಳಿನಂತೆ ಇನ್ನೊಂದು ಕಾಣಿಸಿಕೊಳ್ಳದೆ ನಿರೂಪಣೆಯ ಧಾಟಿ ಎಲ್ಲಿಯೂ ಎಡವದೆ ಸೋಜಿಗದ ಸಂಗತಿಯಾಗಿ ಬಿಡುತ್ತದೆ. ಕಾದಂಬರಿಯುದ್ದಕ್ಕೂ ಅಳವಟ್ಟ ಶೈಲಿ ಸಂವಿಧಾನಶಕ್ತಿ ಕಾದಂಬರಿಕಾರರ ಅನುಭವ ಮೌಲ್ಯವನ್ನು ಹಿಗ್ಗಿಸುತ್ತಾ ಹೋಗುತ್ತದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಬರುವ ನಾಯಿಗೊತ್ತಿ ಕಾದಂಬರಿಯ ಹಂದರ ಅರಳಿಕೊಳ್ಳಲು ನಿಂತ ಕೂವೆ ಮರ ಆತ, ಸಿಂಭಾವಿ, ಲಕ್ಕುಂದ ಮೇಗರಳ್ಳಿ ಹಳೆಮನೆ, ಕಾಡುಹಾದಿ, ಕೋಣೂರು, ಬೆಟ್ಟಳ್ಳಿ ಈ ಪಯಣ ಗುತ್ತಿಯ ಮೂಲಕ ಹೊಮ್ಮುವ ಅನುಭವ ಮಾತ್ರವಲ್ಲದೆ ಇವೇ ಕಾದಂಬರಿಯ ಧಾಟಿ ಧೋರಣೆಗಳ ಪ್ರತಿಫಲನ. ಇದು ಈ ಕಾದಂಬರಿ ಅಳವಡಿಸಿಕೊಂಡ ತಂತ್ರವಾಗಿದ್ದು ಕಥಾ ಬೆಳವಣಿಗೆಗೆ ಇಂಬುಗೊಟ್ಟು, ಕಾದಂಬರಿಯ ಊರ್ಧ್ವಗಾಮಿ ಮಲ್ಯಶೋಧಕ್ಕೆ ಪೂರಕವಾಗುತ್ತದೆ. ''ಮಾನವೀಯ ದೌರ್ಬಲ್ಯಗಳ ಪ್ರಜ್ವಲೀಕರಣ ಪ್ರಯತ್ನದ ಈ ಕಾದಂಬರಿಯ ಕಥಾ ಸರಣಿಯಲ್ಲಿ ಗುತ್ತಿ ಚಾಲಕ ಬಿಂದುವಾಗಿದ್ದವನು ಚಲನಬಿಂದುವಾಗಿ ಬಿಡುವುದು ಕಾದಂಬರಿಯ ಸಂವಿಧಾನದ ಗಮನಾರ್ಹ ಅಂಶ.''[೧] ಕಾದಂಬರಿಯ ನಿರ್ದಿಷ್ಟ ವ್ಯಕ್ತಿ, ಸನ್ನಿವೇಶಗಳ ಸೂಕ್ಷ್ಮ ವಿವರಪೂರ್ಣ ನಿರೂಪಣಾ ತಂತ್ರವನ್ನು ಕುವೆಂಪು ಅವರು ಬಳಸಿದ್ದಾರೆ.

ಕುವೆಂಪುರವರು ಉಪಶೈಲಿಗಳನ್ನು ಕುರಿತು ಹೇಳಿದ್ದಾರೆ. ಭಾಷೆ ಶೈಲಿ ಅವಿನಾ ಸಂಬಂಧ ಹೊಂದಿರುವುದು, ಆಲೋಚನಾ ವಿಧಾನವು ಶೈಲಿಯ ಒಂದು ಭಾಗವಾಗುತ್ತದೆ. ಭಾಷೆ ಮತ್ತು ಶೈಲಿಗಳನ್ನು ಪ್ರತ್ಯೇಕಿಸಲಾಗದ ಒಂದು ಅಖಂಡ ಭಾಗವಾಗುತ್ತವೆ. ಅಕ್ಷರಗಳು, ಪದ ಬಳಕೆಯಲ್ಲಿ ಕರ್ಕಶ ಬಳಕೆ, ಮಾದುರ್ಯ ಬಳಕೆ ಮತ್ತು ಪದಗಳು ವ್ಯಕ್ತಪಡಿಸುವ ಅನೇಕ ಧ್ವನಿಗಳು ಭಿನ್ನ ರೀತಿಗಳಲ್ಲಿ ಬಳಸುತ್ತಾರೆ ಎನ್ನುವುದನ್ನು ಶೈಲಿಯಲ್ಲಿ ನೋಡಬಹುದಾಗಿದೆ.

ಕಾನೂರು ಹೆಗ್ಗಡಿತಿಯ ಮೂರನೆ ಅಧ್ಯಾಯವಾದ ಚಿನ್ನಯ್ಯನ ಮೀನು ಶಿಕಾರಿಯನ್ನು ನೆನಪು ಮಾಡಿಕೊಳ್ಳಿ ಕುವೆಂಪು ಅವರ ವರ್ಣನೆ ಇಲ್ಲಿದೆ: ''ಚಿನ್ನಯ್ಯನು ಕೂತಿದ್ದ ಕೊಂಬೆ ಕೆರೆಗೆ ಚೆನ್ನಾಗಿ ಬಾಗಿದ್ದುದರಿಂದ ತಾನು ಕೂತಿದ್ದ ಮರ, ತಾನು ಬಂದೂಕು, ಆಸನಕ್ಕಾಕ್ಕೆ ಮೆತ್ತಗಾಗಿ ಹಾಕಿಕೊಂಡಿದ್ದ ಕರಿಯ ಕಂಬಳಿ ಎಲ್ಲವೂ ಖಚಿತ ಚಿತ್ರದಂತೆ ಸ್ಪಷ್ಟವಾಗಿ ನೀರಿನಲ್ಲಿ ಪ್ರತಿಬಿಂಬಿತವಾಗಿದ್ದುವು. ತಾವು ಕೂತಿದ್ದ ಮರದಲ್ಲಿ ಒಂದು ಕೊಂಬೆಯಿಂದ ಮತ್ತೊಂದು ಕೊಂಬೆಗೆ ಚಕ್ರಾಕಾರವಾಗಿ ಬಲೆಯನ್ನು ಬೀಸಿ ಕಟ್ಟಿ, ಅದರ ಕೇಂದ್ರದಲ್ಲಿ ನಿಶ್ಚಲವಾಗಿ ಮಂಡಿಸಿದ್ದ ಬಣ್ಣ ಬಣ್ಣದ ದೊಡ್ಡ ಸಲಗವೊಂದು, ಪ್ರತಿಬಿಂಬದಲ್ಲಿ ಆಕಾಶದ ನೀಲಕ್ಕೆದುರಾಗಿ ಕಾಣುತ್ತಿತ್ತು ಚಿನ್ನಯ್ಯನು ಕೋವಿಯನ್ನು ಕೈಯಲ್ಲಿ ಹಿಡಿದು ಕೆರೆಯ ಕಡೆಗೇ ಹುಡುಕು ನೋಟದಿಂದ ನೋಡುತ್ತಾ ಕಾದನು?

ಇಲ್ಲಿ ಕುವೆಂಪು 'ಚಿನ್ನಯ್ಯನ ಮೀನು ಶಿಕಾರಿ' ಯೊಂದಿಗೆ ಬಣ್ಣಬಣ್ಣದ ದೊಡ್ಡಸಲಗವೊಂದರ ಶಿಕಾರಿಯನ್ನೂ ವರ್ಣಿಸುತ್ತಿದ್ದಾರೆ. ಕುವೆಂಪು ಕಾದಂಬರಿಗಳ ವಸ್ತು ವಿನ್ಯಾಸವೂ ಜೇಡರಹುಳುವಿನ ಬಲೆಯಂತೆ ಕೂಡಿದೆ. ಕುವೆಂಪು ಅವರಲ್ಲಿ ಪ್ರಜ್ಞಾಪೂರ್ವಕ ಸೃಷ್ಟಿಯೆನ್ನಬಹುದಾದ ಸಂಕೇತಗಳ ಅಬ್ಬರವಿಲ್ಲ, ಸಮೃದ್ಧವಾದ ಜೀವನಾನುಭವಗಳೇ ಸಹಜ ಸಂಕೇತಗಳಾಗಿ ಬಿಡುವ ಕುಸುರಿಕಲೆ ಕುವೆಂಪು ಕಾದಂಬರಿಗಳಲ್ಲಿದೆ.

ಕುವೆಂಪು ಕಾದಂಬರಿಗಳಲ್ಲಿ ನೇಯ್ದ ಅರಿವೆಯ ಮೇಲಣ ವಿವಿಧ ವಿನ್ಯಾಸಗಳಂತೆ ಮೂಡಿ ಬಂದಿರುವ 'ತಿರ್ಯಕ್ ಆಲಂಬನ' ಕುರಿತು ಮರುಚಿಂತನೆ ನಡೆಯಬೇಕಾಗಿದೆ. ಈ ದೃಷ್ಟಿಯಿಂದ

---

೧. ಸಹ್ಯಾದ್ರಿ – ಕುವೆಂಪು, ಪುಟ – ೬೭೬

ಕಾದಂಬರಿಗಳಲ್ಲಿರುವ ಶ್ವಾನಪುರಾಣ, ಕುಕ್ಕುಟ ಪುರಾಣಗಳು ಗಮನಾರ್ಹವಾಗಿವೆ. ‘‘ಇಂಥ ತಿರ್ಯಕ್ ಪುರಾಣಗಳು ಅಂತಿಮವಾಗಿ ಮಾವನ ಪುರಾಣವಾಗಿ ಪರಿವರ್ತನೆಗೊಳ್ಳುವುದನ್ನು ಗ್ರಹಿಸದಿದ್ದರೆ, ಹಣ್ಣಿನ ತಿರುಳನ್ನೆಸದು ಸಿಪ್ಪೆಯನ್ನು ಜಗಿದಂತಾಗುತ್ತದೆ.’’[೧]

ನಿಸರ್ಗದಿಂದ ದೂರವಾದಂತೆಲ್ಲ ಮನುಷ್ಯರಿಗೊದಗುವ ವಿಕಾರಗಳು- ಮತ್ತು ದುರಂತವನ್ನು ಕಾದಂಬರಿಯ ಹರಹಿನಲ್ಲಿರುವ ಕುಕ್ಕಟ ಪುರಾಣದ ಮೂಲಕ ಬಿಂಬಿಸಿರುವ ಕುವೆಂಪು ಅವರ ಕೌಶಲ್ಯ ವಿಶಾಲವಾದ ಅರ್ಥದಲ್ಲಿ ಜೀವನ ಕಲೆಯ ಪ್ರತೀಕವಾಗಿದೆ.

**********

೧. ಆಲಿಸಯ್ಯ ಮಲೆಯ ಕವಿ – ವಿ.ಚಂದ್ರಶೇಖರ ನಂಗಲಿ, ಪುಟ ೧೪೪

## V. ಕುವೆಂಪು ಕಾದಂಬರಿಗಳಲ್ಲಿ ಪ್ರಾದೇಶಿಕ ಭಾಷಿಕ ನೆಲೆಗಳು

ಭಾಷೆ ಒಂದು ಸಮಾಜದ ಪ್ರದೇಶದ ದೇಶದ ರಾಷ್ಟ್ರದ ಅನನ್ಯತೆಯ ಕುರುಹಾಗಿರುತ್ತದೆ. ಪ್ರತಿಯೊಂದು ಭಾಷೆಯಲ್ಲೂ ಭಾಷಿಕ ಅಂಶಗಳಿರುತ್ತವೆ. ಮಾತನಾಡುವವನ ಗುಣಲಕ್ಷಣಗಳನ್ನು ವಿವರಿಸುತ್ತವೆ. ಸಮಾಜ ಅವರ ಮಾತಲ್ಲಿ ವ್ಯಕ್ತವಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಗೂ ವೈಲಕ್ಷಣ್ಯ ವೈಚಿತ್ರ್ಯ ಗುಣಲಕ್ಷಣಗಳಿರುತ್ತವೆ. ಒಂದು ಸಮಾಜದ ಸಂರಚನೆ ಅಲ್ಲಿಯ ಭಾಷೆಯ ಸಂರಚನೆಯ ಮೇಲೆ ಪ್ರಭಾವ ಬೀರುತ್ತದೆ.

ಉದಾ :- ಮುದುಕರು, ವರ್ಗಗಳು, ಸ್ತ್ರೀ, ಪುರುಷ. ಭಾಷೆ ಮತ್ತು ಸಮಾಜ ನಿಂತ ನೀರಲ್ಲ ಸದಾ ಚಲನಶೀಲವಾದದ್ದು ಮತ್ತು ಬದಲಾಗುತ್ತದೆ. ಬದಲಾವಣೆ ಜೀವಂತಿಕೆಯ ಲಕ್ಷಣ. ಭಾಷೆಗೂ ಮತ್ತುಸಮಾಜಕ್ಕೂ ಯಾವುದೇ ಸಂಬಂಧವಿಲ್ಲ ಎರಡೂ ಪ್ರತ್ಯೇಕ ಸ್ವತಂತ್ರ ಅಸ್ತಿತ್ವವನ್ನು ಉಳ್ಳಂತಹದು. ಇವುಗಳ ಮೂಲಕ ಭಾಷೆ ಮತ್ತು ಸಮಾಜದ ನಡುವೆ ಅವಿನಾಭವ ಸಂಬಂಧವಿದೆ. ಎಡಿನ್‌ಬರ್ಗ್ : ಒಂದು ಸಮಾಜದ ವರ್ಗ, ಸ್ಥಾನ, ಪ್ರಾದೇಶಿಕತೆಯ ಹುಟ್ಟು , ಲಿಂಗ, ವಯಸ್ಸು ಇವುಗಳ ಸೂಚಿಯಾಗುತ್ತದೆ. ಭಾಷೆ, ಭಾಷೆಯ ಮೂಲಕ ಪ್ರಾದೇಶಿಕತೆಯನ್ನು ಸೂಚಿಸಬಹುದು ಮತ್ತು ವಯಸ್ಸು, ಲಿಂಗಬೇಧವನ್ನು ಕಂಡು ಹಿಡಿಯಬಹುದು. ವರ್ಗ, ವ್ಯಕ್ತಿತ್ವ , ಅನನ್ಯತೆಯನ್ನು ತಿಳಿಯಬಹುದಾಗಿದೆ. ಭಾಷೆ ಸಾಮಾಜಿಕ ಬೇಧಗಳನ್ನು ಹುಟ್ಟು ಹಾಕುತ್ತದೆ. ಭಾಷೆ ನಮ್ಮ ಆಲೋಚನೆಯನ್ನು ರೂಪಿಸುತ್ತದೆ.

ಭಾಷೆ ಸಮಾಜದಲ್ಲಿ ಸಂಪರ್ಕಕ್ಕೆ ಅನುರೂಪತೆ ಕೊಡುತ್ತದೆ. ಇವೆರಡೂ ಕೂಡಿದಾಗ ಭಾಷಾ ಸಮುದಾಯವಾಗುತ್ತದೆ. ವಿಭಿನ್ನ ಭಾಷಾ ಸಮುದಾಯಗಳು ಸಂಕೀರ್ಣವಾದ ರೀತಿಯಲ್ಲಿ ಪರಸ್ಪರ ಗುಂಪುಗಳನ್ನು ಅತಿಕ್ರಮಿಸುತ್ತವೆ. ಒಂದು ಭಾಷಾ ಸಮುದಾಯದಲ್ಲಿ ಚಿಕ್ಕ ಚಿಕ್ಕ ಒಳಗುಂಪುಗಳಿರುವುದನ್ನು ಕಾಣಬಹುದು. ಉದಾ :- ವಿದ್ಯಾವಂತ/ ಅವಿದ್ಯಾವಂತರು ವರ್ಗದೃಷ್ಟಿಯಿಂದ ಆಗಿರಬಹುದು. ಜಾತಿ ವೃತ್ತಿಗಳಿಂದ ಆಗಿರುವ ಸಾಧ್ಯತೆ ಇದೆ. ಇವು ಕರ್ನಾಟಕಕ್ಕೂ ಕನ್ನಡಕ್ಕೂ ಅನ್ವಯಿಸುತ್ತದೆ. ಇಲ್ಲಿಯೂ ಪ್ರಾದೇಶಿಕ ಭಿನ್ನತೆ ಇದೆ, ಸಾಮಾಜಿಕ ಬೇಧಗಳಿವೆ. ಉದಾ :- ವೃತ್ತಿ ವರ್ಗ ಲಿಂಗಬೇಧಗಳನ್ನು ನೋಡಬಹುದು.

ನಮ್ಮ ವಿಚಾರಗಳನ್ನು ಹೇಳುವ ಉಪಕರಣ ನಮ್ಮ ಭಾವನೆಗಳನ್ನ ಹೇಳುವ ಸಾಧನ ಭಾಷೆ ನಮ್ಮ ಸಮಾಜದಲ್ಲಿನ ಸ್ಥಾನಮಾನಗಳನ್ನು ಗುರುತಿಸುವ ಮೌಲ್ಯವಾಗಿದೆ. ಭಾಷೆ ಉಪಕರಣವಾಗಿದ್ದರೆ ತನ್ನ ಪಾಡಿಗೆ ತನ್ನ ಕೆಲಸ ನಡೆಯುತ್ತದೆ. ಸಮಾಜ ದೃಷ್ಟಿಯಿಂದ ಭಾಷೆ ಕೇವಲ ಸಂವಹನಕ್ಕೆ ಬಳಸುವ ಉಪಕರಣವಲ್ಲ, ಮನುಷ್ಯನ ಮೌಲ್ಯವನ್ನು ಗುರುತಿಸುವ ಸಾಧನವಾಗಿರುತ್ತದೆ. ಮೌಲ್ಯ ಬಂದಾಗ ಮೇಲುಕೀಳುಗಳು ಉಂಟಾಗುತ್ತದೆ. ಭಾಷೆ ಉತ್ತಮವಾದದ್ದು, ಉತ್ತಮ ಅಲ್ಲದ್ದು, ಇದನ್ನು ಶ್ರೇಣೀಕರಣ

ಎನ್ನುತ್ತಾರೆ. ಪ್ರತಿಯೊಬ್ಬ ಮನುಷ್ಯನಿಗೆ ಜೀವನ ನಡೆಸಲು ಬೇಕಾದಷ್ಟು ಭಾಷೆ ಬರುತ್ತವೆ. ಅವರ ಕಸುಬು ಅವರಿಗೆ ಬೇಕಾದ ಭಾಷೆಯನ್ನು ಕಲಿಸುತ್ತದೆ.

ಅನುಭವ ವಿಶೇಷವಾದ ಅಭಿವ್ಯಕ್ತಿ ಸಾಹಿತ್ಯವಾದರೆ ಅಭಿವ್ಯಕ್ತಿಗೆ ಮಾಧ್ಯಮ ಭಾಷೆಯಾಗುತ್ತದೆ. ಸಾಹಿತ್ಯ ಜೀವನದ ಪ್ರತಿಸೃಷ್ಟಿಯಾಗಿರುವುದರಿಂದ ಲೇಖಕನು ವಿಶಿಷ್ಟ ಸಾಂಸ್ಕೃತಿಕ ಪರಿಸರದಲ್ಲಿ ಜೀವನವನ್ನು ಪ್ರತಿ ಸೃಷ್ಟಿಸುವಾಗ ಕೃತಿಗೆ ಆ ನೆಲದ ಭಾಷೆ ದ್ರವ್ಯವಾಗಿ ಬರುತ್ತದೆ. ಆದ್ದರಿಂದ ಕೃತಿಯ ವಸ್ತು ಕಥಾ ಸಂವಿಧಾನ, ಪಾತ್ರ ಚಿತ್ರಣ, ಜೀವನದರ್ಶನದಷ್ಟೇ ಭಾಷೆಯೂ ಮುಖ್ಯವಾಗುತ್ತದೆ. ಕಾದಂಬರಿಕಾರನಲ್ಲಿ ಪರಿಸರದ ಭಾಷಾಪ್ರಜ್ಞೆ, ಆಡುನುಡಿಯ ಸ್ವರೂಪ ಮಣ್ಣಿನ ವಾಸನೆಯನ್ನು ಗರ್ಭೀಕರಿಸಿಕೊಂಡಿರುವ ಗಾದೆ, ನುಡಿಗಟ್ಟು, ಪದಗಳ ಧ್ವನ್ಯಾತ್ಮಕ ಸ್ವರೂಪ, ಪದಗಳ ಸಾಂಸ್ಕೃತಿಕ ನಿಷ್ಪತ್ತಿ ಭಾಷೆಯ ಬಗೆ–ಬನಿ–ಇತ್ಯಾದಿಗಳನ್ನು ತೆರದ ಕಣ್ಣಿನಿಂದ ನೋಡುವ ದೃಷ್ಟಿಯಿರಬೇಕು.

ಕಾದಂಬರಿಗಳ ಸಾಹಿತ್ಯಿಕ ಶಿಲ್ಪ, ಸಾಂಸ್ಕೃತಿಕ ವೈಶಿಷ್ಟ್ಯಗಳಂತೆ ಭಾಷಿಕ ಅಧ್ಯಯನವೂ ವೈಶಿಷ್ಟ್ಯಪೂರ್ಣವೆನಿಸಿದೆ. ಒಂದು ಭಾಷೆಯ ಭಿನ್ನತೆಗೆ ಅನೇಕ ಸಾಂಸ್ಕೃತಿಕ ಕಾರಣಗಳಿರುತ್ತವೆ. ಅವುಗಳಲ್ಲಿ ಮುಖ್ಯವಾಗಿ ನೈಸರ್ಗಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ, ಆರ್ಥಿಕ ಮುಂತಾದವುಗಳು ಭಾಷೆಯ ಮೇಲೆ ಹೆಚ್ಚು ಪ್ರಭಾವ ಬೀರಿರುತ್ತವೆ.

ನೈಸರ್ಗಿಕ ಕಾರಣವಾಗಿ ಎತ್ತರದ ಗುಡ್ಡ ಬೆಟ್ಟಗಳು, ದಟ್ಟ ಅರಣ್ಯಗಳು, ಆಳವಾದ ನದಿಕೊಳಗಳಿಂದ ಬಹುಕಾಲ ಜನಾಂಗಗಳ ನಡುವೆ ಸಂಪರ್ಕ ಕಡಿಮೆಯಾದಾಗ ಸಂಸ್ಕೃತಿ–ಭಾಷೆಗಳಲ್ಲಿ ವ್ಯತ್ಯಾಸಗಳು ನಿರ್ಮಾಣಗೊಳ್ಳುತ್ತವೆ. ಇದೇ ಮುಂದುವರೆದು ಭಾಷಾ ಪ್ರಭೇದಗಳು ಉಂಟಾಗಿ ಪ್ರಾದೇಶಿಕ ರೂಪ ತಾಳುತ್ತದೆ. ಆದ್ದರಿಂದ ಜನರ ಭಾಷೆಯ ಮೇಲೆ ಪ್ರಾದೇಶಿಕತೆಯ ಪ್ರಭಾವ ಅನನ್ಯವಾಗಿರುತ್ತವೆ. ಪ್ರದೇಶದ ಭೌಗೋಳಿಕ ಸ್ಥಿತಿಗತಿಗಳು ನೈಸರ್ಗಿಕ ಅನುಕೂಲ ಅನಾನುಕೂಲಗಳನ್ನು ಜನರ ಭಾಷೆ ರೂಪಿಸುತ್ತವೆ. ಭೌಗೋಳಿಕ ಪರಿಸರ ಏಕರೂಪದ್ದಾಗಿಲ್ಲ. ಅಂತೆಯೇ ಆಯಾ ಪರಿಸರಗಳನ್ನನುಸರಿಸಿ ಭಾಷೆಯೂ ಏಕರೂಪದ್ದಾಗಿಲ್ಲ.

ಪ್ರಾದೇಶಿಕ ಕಾದಂಬರಿಕಾರರು ತಮ್ಮ ಕೃತಿಗಳಿಗೆ ಆರಿಸಿಕೊಂಡ ವಸ್ತು ಗ್ರಾಮೀಣ ಪರಿಸರದ್ದಾಗಿದೆ. ಅಲ್ಲಿನ ಜನರ ಜೀವನ ಸಂಸ್ಕೃತಿ –ಪ್ರವೃತ್ತಿ–ಭಾಷೆಗಳನ್ನು ಪ್ರಾದೇಶಿಕ ಕಾದಂಬರಿಗಳು ಪ್ರತಿಬಿಂಬಿಸುತ್ತವೆ. ಆದ್ದರಿಂದ ಮೌಖಿಕ ಭಾಷೆಯ ಮೇಲೆ ಹೆಚ್ಚು ಅವಲಂಬಿತವಾಗಿರುವ ಪ್ರಾದೇಶಿಕ ಕಾದಂಬರಿಗಳಲ್ಲಿ ಭಾಷೆಯ ನೆಲೆಗಳನ್ನು ನೋಡಬಹುದು. ಸದಾ ಚಲನಶೀಲವಾದ ಭಾಷೆ–ಭೌಗೋಳಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ತರಗಳಲ್ಲಿ ಬದಲಾವಣೆಯಾಗುತ್ತವೆ. ಅವುಗಳ ಪ್ರಮಾಣ ಎಲ್ಲ ಕಡೆಗೂ ಒಂದೇ ರೀತಿಯದ್ದಾಗಿರುವುದಿಲ್ಲ. ಅದು ಪ್ರದೇಶಗಳ ವಿಸ್ತಾರ. ಅನ್ಯಭಾಷಾ ಪ್ರಭಾವ ಸಂಮಿಶ್ರಣ ಧ್ವನಿ ವ್ಯತ್ಯಾಸ, ರೂಪ ವ್ಯತ್ಯಾಸ, ಅರ್ಥ ವ್ಯತ್ಯಾಸ ಹಾಗೂ ಇತರ ಕಾರಣಗಳಿಂದ ಭಿನ್ನವಾಗಿರುತ್ತದೆ. ಅವುಗಳ ಸ್ವರೂಪವನ್ನು ಗುರುತಿಸುವ ಕೆಲಸ ಭಾಷಾ ವಿಜ್ಞಾನದಲ್ಲಿ ನಡೆದಿರುತ್ತದೆ. ಪ್ರಾದೇಶಿಕ ಕಾದಂಬರಿಗಳಲ್ಲಿ ಭಾಷಿಕ ನೆಲೆಗಳನ್ನು 2 ರೀತಿಯಲ್ಲಿ ವಿಂಗಡಿಸಬಹುದು.

1) ಪ್ರಾದೇಶಿಕ ಭಿನ್ನತೆ :– ಪ್ರದೇಶಗಳಿಗೆ ಅನುಗುಣವಾಗಿ ಕುವೆಂಪು ಕಾದಂಬರಿಗಳಲ್ಲಿ 2 ರೀತಿ ವಿಭಾಗ ಕ್ರಿಯೆ ಮಾಡಬಹುದು. ಘಟ್ಟದ ಕೆಳಗೆ ಮತ್ತುಘಟ್ಟದ ಮೇಲೆ ಆಡುವ ಭಾಷೆ ಎಂದು ವಿಭಾಗ ಮಾಡಬಹುದು. ಅವುಗಳಲ್ಲಿಯೂ ಭಿನ್ನತೆಗಳಿರುವುದನ್ನು ಕಾಣಬಹುದಾಗಿದೆ. ಉದಾ :– ದಕ್ಷಿಣ ಕನ್ನಡ ಜಿಲ್ಲೆಯ ಘಟ್ಟದ ಕೆಳಗಿನವರಾದ ರಂಗಪ್ಪಶೆಟ್ಟರು ಮಾತನಾಡುವ ಕನ್ನಡದಲ್ಲಿ ತುಳು ಭಾಷೆ ಮಿಶ್ರಣವಾಗಿರುವುದನ್ನು ಗಮನಿಸಬಹುದು. ರಂಗಪ್ಪಶೆಟ್ಟರು ಸುಬ್ಬಮ್ಮನ ತಂದೆ ಪೆದ್ದೇಗೌಡರೊಟ್ಟಿಗೆ ಮಾತನಾಡುವಂತಹ ಸಂದರ್ಭ ''ಹಾಂಗೆ ಮಾಡೂಕಾಗ ಕಾಣೆ ! ಇವತ್ತೇ ಕಳಿಸಬೇಕೆಂಬ್ರು ! ಕಳಿಸಿನಿಬಿಡಿನಿ ! ನಾ ಹೋತೆ ! – ನಮ್ಮ ಗೌಡರಿಗೆ ತಲೆ ಕೆಟ್ಟತ್ತಂಬ್ರು ! ಈವತ್ತು ಇದ್ದ ಬುದ್ಧಿ ನಾಳೆ ಇರಲಿಕ್ಕಿಲ್ಲ! ನೀವು ಕಳಿಸಿದರೆ ಕಳಿಸಿನಿ ! ಬಿಟ್ಟರೆ ಬಿಡಿನಿ ನಾನು ಹೋಗಿ ಬತ್ತೆ''[೧] ಇದೇ ಸೇರೆಗಾರ ಘಟ್ಟದ ಮೇಲಿನವರ ಜೊತೆ ಸೇರಿ ಅಲ್ಲಿಯ ಜನರಂತೆಯೇ ಬಳಸುವ ಭಾಷೆಯನ್ನು ಗಮನಿಸುವುದಾದರೆ ಅವನು ಘಟ್ಟದ ಕೆಳಗಿನಿಂದ ಬಂದ ವಲಸಿಗನಲ್ಲ, ಘಟ್ಟದ ಮೇಲಿನವನೇ ಇರಬೇಕು ಎನ್ನಿಸುತ್ತದೆ. ಅಷ್ಟು ಸರಾಗವಾಗಿ ಘಟ್ಟದ ಮೇಲಿನವರಂತೆಯೇ ಮಾತನಾಡುವುದನ್ನು ನೋಡಬಹುದಾಗಿದೆ.

2) ಸಾಮಾಜಿಕ ಭಿನ್ನತೆ :– ಸಾಮಾಜಿಕ ಭಿನ್ನತೆಗಳನ್ನಾಧರಿಸಿ ಇಲ್ಲಿ ಪ್ರಮುಖವಾಗಿ ಭಾಷಾ ವ್ಯತ್ಯಾಸಗಳನ್ನು ಗಮನಿಸಲಾಗುತ್ತದೆ. 'ಸಮಾಜ' ಎಂದಾಗ ಅದರಲ್ಲಿ ವಿವಿಧ ಜಾತಿ, ಮತ, ಪಂಗಡ, ವಿವಿಧ ವರ್ಗಗಳ ಜನರಿರುತ್ತಾರೆ. ಅವರ ಆಚಾರ, ವಿಚಾರ, ಶಿಕ್ಷಣ, ಲಿಂಗ, ಉದ್ಯೋಗ, ಸ್ಥಾನಮಾನಗಳಿಗೆ ಅನುಗುಣವಾಗಿ ಭಾಷೆಯಲ್ಲಿ ಅನೇಕ ವ್ಯತ್ಯಾಸಗಳನ್ನು ನೋಡಬಹುದಾಗಿದೆ.

ಈ ಕಾದಂಬರಿಗಳಲ್ಲಿ ಕಂಡುಬರುವ ಮತ್ತೊಂದು ವಿಶಿಷ್ಟತೆಯೆಂದರೆ ಭಾಷೆಯ ಬಳಕೆಯಲ್ಲಿ ಕುವೆಂಪು ಅವರಿಗಿರುವ ಔಚಿತ್ಯಪ್ರಜ್ಞೆಯನ್ನು ನೋಡಬಹುದು. ಅವರ ಭಾಷೆಯ ಸೊಬಗು ಅವರ ಕಾದಂಬರಿಗಳಲ್ಲಿನ ಪಾತ್ರಗಳ ಸಂಭಾಷಣೆಯಲ್ಲಿದೆ. ಇಲ್ಲಿ ಪಾತ್ರಕ್ಕೆ ತಕ್ಕಂತೆ ಭಾಷೆಯನ್ನು ಅಳವಡಿಸಿಕೊಂಡಿರುವುದು ಅವರ ಕಾದಂಬರಿಗಳಲ್ಲಿನ ಪಾತ್ರಗಳಂತೆಯೇ ಭಾಷೆಯನ್ನು ಸಹ ವರ್ಗೀಕರಿಸಬಹುದಾಗಿದೆ. ಆ ಭಾಷಾ ಬೇಧವನ್ನು ಈ ಕೆಳಗಿನಂತೆ ವಿಂಗಡಿಸಬಹುದು.

1) ಜಾತಿ ಭಾಷೆ :– ಬ್ರಾಹ್ಮಣರು, ಲಿಂಗಾಯತರು, ಒಕ್ಕಲಿಗರು, ಶೂದ್ರರು, ಮರಾಠರು, ತೆಲುಗರು, ಜೈನರು, ಮುಸ್ಲಿಂರು, ಕ್ರಿಶ್ಚಿಯನ್ ಮೊದಲಾದವರು.
2) ವರ್ಗ ಭಾಷೆ :– ಶ್ರೀಮಂತರು, ಜಮೀನುದಾರರು, ಕೂಲಿಕಾರರು, ಬಡವರು, ಕಾರ್ಮಿಕರು
3) ವೃತ್ತಿ:– ಪುರೋಹಿತರು, ವ್ಯಾಪಾರಿಗಳು, ಸೇರೆಗಾರರು, ಬ್ಯಾರಿಗಳು, ಮೇಸ್ತ್ರಿಗಳು
4) ಲಿಂಗ ಹಾಗೂ ವಯೋಗುಣ ಭಾಷೆ :– ಸ್ತ್ರೀಯರು, ಪುರುಷರು, ಮಕ್ಕಳು, ತರುಣರು
5) ಶೈಕ್ಷಣಿಕ :– ಕಲಿತವರು ಮತ್ತು ಕಲಿಯದವರು

ಇಲ್ಲಿ ಭಾಷೆಯ ಏರಿಳಿತಗಳನ್ನು ನಯ, ಒರಟುಗಳನ್ನು ಹರಿತ ಕೊರತೆಗಳನ್ನು ಹಮ್ಮುಬಿಮ್ಮುಗಳನ್ನು ಕೊಂಕು, ಶೀಲಾಶ್ಲೀಲಗಳನ್ನು ನೋಡಬಹುದು. ಇಲ್ಲಿ ಕೇಳುವ ಸಂಭಾಷಣೆ ಪಾತ್ರಗಳ ಮೇಲೆ, ಕಥೆಯ

೧. ಕಾನೂರು ಹೆಗ್ಗಡಿತಿ, ಐದನೇ ಮುದ್ರಣ ೧೯೭೦, ಪುಟ ೧೩೪

ಮೇಲೆ, ಕ್ರಿಯೆಯ ಮೇಲೆ ಬೆಳಕು ಚೆಲ್ಲುವುದು ಅಮೂಲ್ಯವಾದ ಸಂಗತಿಯಾಗಿದೆ. ಪಾತ್ರಗಳೇ ಪರಸ್ಪರ ಸಂಭಾಷಣೆಯಲ್ಲಿ ತೊಡಗಿದಾಗ ಅವರ ಅಂತರಂಗವನ್ನು ಅನಾವರಣ ಮಾಡಿದಂತಾಗುತ್ತದೆ.

ಸಾಮಾಜಿಕವಾಗಿ ಮೊದಲ ಸ್ಥಾನದಲ್ಲಿರುವ ಬ್ರಾಹ್ಮಣರು ಆಡುವ ಭಾಷೆಯು ಕರ್ನಾಟಕದ ಎಲ್ಲಪ್ರದೇಶಗಳಲ್ಲಿ ಏಕಸ್ತರವಾಗಿಲ್ಲ ಸಂಸ್ಕೃತ ಭಾಷೆಯ ಪ್ರಭಾವ ಅವರ ಮಾತುಗಳಲ್ಲಿ ಕಾಣಸಿಗುತ್ತದೆ. ಹೀಗಾಗಿ ಅವರ ಭಾಷೆ ಶಿಷ್ಟವೂ, ಪ್ರೌಢವೂ ಆಗಿರುತ್ತದೆ. ಬ್ರಾಹ್ಮಣೇತರ ಭಾಷೆಗಳಲ್ಲಿ ಪ್ರಾದೇಶಿಕ ವ್ಯತ್ಯಾಸಗಳನ್ನು ಗುರುತಿಸಬಹುದಾಗಿದೆ.

ಬ್ರಾಹ್ಮಣರು ಬಳಸುವ ಕನ್ನಡಕ್ಕೂ, ಒಕ್ಕಲಿಗರು ಬಳಸುವ ಕನ್ನಡಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಬಹುದು. ಕಾನೂರು ಹೆಗ್ಗಡಿತಿಯಲ್ಲಿ ಬರುವ ವೆಂಕಪ್ಪಯ್ಯ ಜೋಯಿಸರು ಚಂದ್ರಯ್ಯಗೌಡ ಜೊತೆ ಮಾತನಾಡುವ ಒಂದು ಸಂಭಾಷಣಾ ಸಂದರ್ಭವನ್ನು ನೋಡಬಹುದು.
ವೆಂ.ಜೋ. :– ನಾನು ಹೇಳಿದ್ದೆ ನಿನಗೆ ಮೊದಲೇ. ಈಗಿನ ವಿದ್ಯಾಭ್ಯಾಸ ಹಾಳು ಮಾಡಿ ಬಿಡುತ್ತದೆ ಎಂದು ! ದೇವರು ದಿಂಡರು ಭಕ್ತಿಗಿಕ್ತಿ ಎಲ್ಲ ನಿರ್ನಾಮ ! ಜೊತೆಗೆ ನೂರಾರು ಹವ್ಯಾಸಗಳನ್ನು ಬೇರೆ ಕಲಿತು ಬಿಡುತ್ತಾರೆ. ನಿನ್ನ ಮನೆ, ಜಮೀನು ಉಳಿಯಬೇಕಾದರೆ ಅವರ ಓದು ನಿಲ್ಲಿಸಿ ಮದುವೆಗಿದುವೆ ಮಾಡಿ ಕೆಲಸಕ್ಕೆ ಹಚ್ಚು. ಸಂಸಾರ ತಲೆಗೆ ತಾಗಿದರೆ ಆಗ ಬುದ್ಧಿ ಬರುತ್ತದೆ.

ಚಂ.ಗೌ. :– ಹಾಂಗೆ ಮಾಡೋದೆ ಸೈ ಅಂತಾ ಕಾಣ್ತದೆ – ಈಗ ನೋಡಿ, ಆ ಹೂವಯ್ಯ , ಅವನ ದೆಸೆಯಿಂದ ರಾಮಯ್ಯ ಇಬ್ಬರೂ ಸೇರಿ ದೆಯ್ಯ ದ್ಯಾವರು ಭೂತಗೀತ ಜಕಣಿಗಿಕಣಿ ಒಂದು ಬ್ಯಾಡ ಅಂತ ಬೋದ್ನೋಕೆ ಸುರು ಮಾಡಿದ್ದಾರೆ. ಆ ಹೂವಯ್ಯನಂತೂ ಅದೆಂತಂತದೊ ಭಗವದ್ಗೀತೆಯಂತೆ, ಉಪ್ನಿಷತ್ತಂತೆ, ಓದಿ ತಲೆ ಕೆಡಿಸಿಕೊಳ್ಳುತ್ತಿದ್ದಾನೆ... ಮನೆಗೆ ಬಂದವನು ಒಂದು ಆಳಿನ ಕೆಲಸ ಕೂಡ ನೋಡೋದಿಲ್ಲ ಉಪ್ಪರಿಗೆ ಮೇಲೆ ಓದುತ್ತಾ ಕೂತು ಬಿಡ್ತಾನೆ.

ವೆಂ.ಜೋ. :– ಹೌದು, ದುಡಿದು ಹಾಕುವವರು ಒಬ್ಬರಿದ್ದರೆ ಮತ್ತೇನು ಮಾಡುತ್ತಾನೆ ? ಅವನ ಪಾಲು ಅವನಿಗೆ ಕೊಟ್ಟು ಬೇರೆ ಹಾಕು ! ಆಗೆಲ್ಲ ಸರಿ ಹೋಗುತ್ತದೆ. ಈ ಶೂದ್ರ ಮಕ್ಕಳಿಗೆಲ್ಲ ಉಪನಿಷತ್ತು ಭಗವದ್ಗೀತೆ ಗಂಧವಾದರೂ ಗೊತ್ತಾಗುತ್ತದೆಯೇ ? ನಮಗೆ ಗೊತ್ತಾಗುವುದಿಲ್ಲ.....'' [೧]

ಮೇಲಿನ ಸಂಭಾಷಣೆಯಲ್ಲಿ ಒಬ್ಬರದು ಶಿಷ್ಟಭಾಷೆ, ಮತ್ತೊಬ್ಬರದು ಪ್ರಾದೇಶಿಕ ಭಾಷೆ. ಶಿಷ್ಟ ಭಾಷೆಯನ್ನಾಡುವ ಬ್ರಾಹ್ಮಣರ ಕನ್ನಡದಲ್ಲಿ ಮನೆ ಮುರುಕುತನ ಬುದ್ಧಿ, ಕಿತಾಪತಿ ಎದ್ದು ಕಾಣಿಸಿದರೆ, ಗ್ರಾಮ್ಯರಾದ ಒಕ್ಕಲಿಗ ಕನ್ನಡದಲ್ಲಿ ಮೌಢ್ಯ , ದಾಸ್ಯ , ನಿಷ್ಕಪಟ ಎದ್ದು ಕಾಣುತ್ತದೆ.

ಬ್ರಾಹ್ಮಣರು ವಯಸ್ಸಿನಿಂದ ಚಿಕ್ಕವರಾಗಿದ್ದರೂ ಬ್ರಾಹ್ಮಣೇತರರೊಂದಿಗೆ ಮಾತನಾಡುವಾಗ ಏಕವಚನ ಪ್ರಯೋಗ ಮಾಡುವುದನ್ನು ಕಾಣುತ್ತೇವೆ. ಗೌಡರು ಜೋಯಿಸರಿಗಿಂತಲೂ ಹೆಚ್ಚು ವಯಸ್ಸಿನವರಾಗಿದ್ದರು. ಬ್ರಾಹ್ಮಣನು ಶೂದ್ರನನ್ನು ಬಹುವಚನದಲ್ಲಿ ಮಾತನಾಡಿಸುವುದು ಶಾಪಕ್ಕೆ

---
೧. ಕಾನೂರು ಹೆಗ್ಗಡಿತಿ – ಕೆ.ವಿ.ಪುಟ್ಟಪ್ಪ, ಪುಟ ೭೪

ಸಮಾನವೆಂದೂ, ಏಕವಚನದಲ್ಲಿ ಮಾತನಾಡಿಸುವುದು ಅನುಗ್ರಹಕ್ಕೆ ಸಮಾನವೆಂದೂ ಭಾವಿಸಲಾಗಿತ್ತು. ಇದರಿಂದ ಸಮಾಜದಲ್ಲಿ ಅವರ ಸ್ಥಾನಮಾನ ಹಾಗೂ ಭಾಷೆಯ ಸ್ವರೂಪ ವ್ಯಕ್ತವಾಗುತ್ತದೆ. ಅದಕ್ಕೆ ಉದಾ :– ಜೋಯಿಸರು ಅಣ್ಣಯ್ಯಗೌಡನೊಂದಿಗೆ ಮಾತನಾಡುವಾಗ

''ಹೌದು ಕಣೋ ಅಣ್ಣಯ್ಯ , ನಿನಗಿಷ್ಟು ವಯಸ್ಸಾಗಿದೆ, ಇನ್ನೂ ಗೊತ್ತಾಗೊದಿಲ್ಲವೇನೊ ! ಸಾಲ ಮಾಡುತ್ತಲೇ ಇದ್ದುಬಿಟ್ಟರೆ ಬೆಳೆಯುತ್ತಲೇ ಹೋಗುತ್ತದೆ. ಅದನ್ನು ಯಾವಾಗ ತೀರಿಸುವುದು ? ಋಣ ಎಂಬುದು ಕುತ್ತಿಗೆಗೆ ಕಲ್ಲು ಗುಂಡು ಕಟ್ಟಿಕೊಂಡ ಹಾಗೆ''[೧]

ಮಲೆಗಳಲ್ಲಿ ಮದುಮಗಳುವಿನಲ್ಲಿ ಕಲ್ಲೂರಿನ ಮಂಜಭಟ್ಟರು ಬೆಟ್ಟಳ್ಳಿ ಬ್ರಾಹ್ಮಣೇತರರೊಂದಿಗೆ ಮಾತನಾಡುವಾಗ – ''ಓಹೋ ಹೋ, ಏನು ದ್ಯಾವಣ್ಣನ ಸವಾರಿ ದೇವಸ್ಥಾನದವರೆಗೂ ಚಿತ್ತೈಸಿದೆಯಲ್ಲಾ ! ಕಲ್ಲಯ್ಯ ಬಂದಿಲ್ಲೇನೋ ? ಹುಷಾರಾಗಿದ್ದಾನಷ್ಟೇ ?''[೨]

ಈ ಮಾತುಗಳಲ್ಲಿ ಅಧಿಕಾರ ವಾಣಿಯ ಜೊತೆಗೆ ತಿರಸ್ಕಾರದ ವ್ಯಂಗ್ಯವೂ ತುಂಬಿಕೊಂಡಿರುವುದನ್ನು ನೋಡಬಹುದು. ಅವರ ಮಾತುಗಳಲ್ಲಿ ಬಳಸುವ ಕೋಪ, ದಯಾಸಾಗರ, ಕರುಣಾಶಾಲಿ, ಕಲ್ಲುಗುಂಡು, ಋಣ, ಚಿತ್ತೈಸು, ಹುಷಾರುಗಳಲ್ಲಿ ಶಿಷ್ಟ ಭಾಷೆಯ ಪ್ರಯೋಗವನ್ನು ಕಾಣುತ್ತೇವೆ.

ಸಾಮಾಜಿಕವಾಗಿ ಬ್ರಾಹ್ಮಣರ ನಂತರದಲ್ಲಿ ಪ್ರಮುಖವಾಗಿ ಬರುವವರು ಒಕ್ಕಲಿಗರು–ಗೌಡರು, ಅವರ ನಂತರದಲ್ಲಿ ಹಳೆ ಪೈಕದವರು, ಆಮೇಲೆ ಬೇಲರು ಇತ್ಯಾದಿಗಳು. ಆರ್ಥಿಕವಾಗಿ, ಶೈಕ್ಷಣಿಕವಾಗಿ ಪ್ರಬಲರಾದ ಮುಸ್ಲಿಂರು, ಕ್ರಿಶ್ಚಿಯನ್ನರು ಪ್ರಮುಖರಾಗಿರುತ್ತಾರೆ. ಕುವೆಂಪು ಕಾದಂಬರಿಗಳಲ್ಲಿ ಇವರುಗಳ ನಡುವಿನ ಸಂಬಂಧಗಳನ್ನು ಅವರ ವರ್ತನೆ ಹಾಗೂ ಭಾಷೆಗಳಿಂದ ತಿಳಿಯಬಹುದಾಗಿದೆ. ಕಾನೂರಿನ ಚಂದ್ರಯ್ಯಗೌಡ ಹಾಗೂ ಅಣ್ಣಯ್ಯಗೌಡ ಇಬ್ಬರೂ ಸಮಾನ ಜಾತಿಯವರಾಗಿದ್ದರೂ ಅವರ ಸ್ಥಾನಮಾನಗಳಲ್ಲಿ ಅಂತರವಿದೆ. ಆರ್ಥಿಕವಾಗಿ ಪ್ರಬಲರಾದ ಚಂದ್ರಯ್ಯ ಯಜಮಾನರಾದರೆ ಅಣ್ಣಯ್ಯ ಗದ್ದೆ ತೋಟಗಳನ್ನು ಮಾಡುವ ಒಕ್ಕಲಾಗಿದ್ದಾರೆ. ಅಲ್ಲದೆ ನಿರಕ್ಷರಿಗಳಾಗಿದ್ದಾರೆ. ಚಂದ್ರೇಗೌಡರ ಬಳಿ ಸಾಲ ಕೇಳಲು ಬಂದ ಅಣ್ಣಯ್ಯಗೌಡರು ಬಾಯಲ್ಲಿ ತಾಂಬೂಲದ ಎಂಜಲನ್ನು ತುಂಬಿಕೊಂಡು ಆಡುವ ಮಾತಿನಲ್ಲಿ ವಿಕೃತ ಉಚ್ಚಾರಗಳನ್ನು ಗಮನಿಸಬಹುದು.

''ಏಣು ಮಾಡೋಡೂ ಹೇಳಿ, ಅವಣಿಗೊಂಡು ಲಗ್ನ ಮಾಡ್ಬೇಕೋ ಬೇಡವೋಣಮ್ಮ ಸಾಳ ಣಾಣೇಣೂ ಣುಂಗಾದಿಳ್ಳ...ಣಾಣೊಂಡಲಿಯಾಳೇ ಸಟ್ರೂ ಅವಣಿಡ್ಡಾಣಲ್ಲ ಟೀರ್ಸ್ಕೆ''[೩]

ಇಲ್ಲಿ ದಂತ್ಯಾಕ್ಷರಗಳಿಗೆ ಬದಲಾಗಿ ಮೂರ್ಧನ್ಯಾಕ್ಷರಗಳು ಬಳಕೆಗೊಂಡಿದೆ ನ=ಣ, ಲ=ಳ, ದ=ಡ, ತ=ಟ ಅವರ ಮಾತಿಗೆ ಚಂದ್ರೇಗೌಡರ ಉತ್ತರ : ನೀ ಲಗ್ನ ಮಾಡೋದು ಬ್ಯಾಡ ಅಂತ ಹೇಳಿದೇನೇ ನಾನು ? ನನ್ನಿಂದ ಒಂದು ಕಾಸೂ ಕೇಳಬೇಡ.... ಈ ವರ್ಷದ ಗುತ್ತಿಗೇನೂ ಪೂರಾ ಕೊಟ್ಟಿಲ್ಲ ನೀನು'

---

೧. ಕಾನೂರು ಹೆಗ್ಗಡಿತಿ – ಕುವೆಂಪು, ಪುಟ ೭೧
೨. ಮಲೆಗಳಲ್ಲಿ ಮದುಮಗಳು– ಕುವೆಂಪು, ಪುಟ ೫೧೧
೩. ಕಾನೂರು ಹೆಗ್ಗಡಿತಿ – ಪುಟ ೭೧

ಇಲ್ಲಿ ಶ್ರೀಮಂತ ಚಂದ್ರೇಗೌಡರ ದರ್ಪದ ಮಾತುಗಳನ್ನು ಗುರುತಿಸಬಹುದು. ತಾಂಬೂಲದ ಎಂಜಲು ಉಗಿದ ಅನಂತರ ಅದೇ ಅಣ್ಣೇಗೌಡ ಮಾತನಾಡುವ ಮಾತು''ಹೌದು ಸ್ವಾಮಿ, ನೀವೇನೋ ಹೇಳ್ತೀರಿ, ಈಗ ಕಲ್ಗುಂಡು ಕಟ್ಕೊಂಡಾಗಿದೆಯಲ್ಲ ಏನು ಮಾಡೋದು? `ಹುಡುಗನಿಗೂ ನನಗೂ ದಿನಾನೂ ಜಟಾಪಟಿ, ವಯಸ್ಸು ಇಪ್ಪತ್ತೈದಾಗಿ ಹೋಯ್ತು ಮದುವೆ ಮಾಡದಿದ್ರೆ ಮನೆ ಬಿಟ್ಟು ಹೋಗ್ತೀನಿ ಅಂತಾನೆ''[೧] ಇಲ್ಲಿ ಒಬ್ಬನೇ ವ್ಯಕ್ತಿ ತಾಂಬೂಲದ ಎಂಜಲು ತುಂಬಿದ ಬಾಯಿಯಲ್ಲಿ ಮಾತನಾಡುವ ಮಾತಿಗೂ ಉಗುಳನ್ನು ಉಗಿದ ಮೇಲೆ ಮಾತನಾಡುವ ಮಾತಿಗೂ ಇರುವ ವ್ಯತ್ಯಾಸವನ್ನು ಕುವೆಂಪು ಸಮರ್ಥವಾಗಿ ಗಮನಿಸಿರುವುದನ್ನು ನೋಡಬಹುದು.

ಸಮಾನ ಜಾತಿಯ ವ್ಯಕ್ತಿಗಳ ನಡುವಿನ ಸಂಬಂಧದ ಇನ್ನೊಂದು ಚಿತ್ರವನ್ನು 'ಮಲೆಗಳಲ್ಲಿ ಮದುಮಗಳು' ಒದಗಿಸುತ್ತದೆ. ಹೂವಳ್ಳಿ ವೆಂಕಟಣ್ಣ ಹಾಗೂ ಹಳೆಮನೆ ಸುಬ್ಬಣ್ಣ ಹೆಗಡೆಯವರ ನಡುವೆ ಹಂದಿ ವ್ಯಾವಹಾರದ ಮಾತುಗಳು.

ಸು.ಹೆ. :– ನೀ ಒಳ್ಳೆ ಗಿರಾಸ್ತ ಕಣೋ! ಅಲ್ಲಾ ನಿನ್ನೆ ಬತ್ತೀನಿ ಅಂದಾಂವ

ವೆಂಕಣ್ಣ:– ನಾನ್ ಏನ್ ಮಾಡಾದ್ರಾ? ಹ್ಯಾಂಗ್ಯಾರೆ ಆ ಸನಿ ಮುಂಡೇ ಮಕ್ಳು ಬತ್ತೀನಿ ಅಂದೋರು ಬರ್‍ಲೇ ಇಲ್ಲ ಕಾದೆ ಕಾದೆ.... ಹೊತ್ತಾಗಿ ಹೋತು, ಇನ್ನೇನ್ ಮಾಡಾದು..... ನಾಳೆ ಬೆಳಿಗ್ಗೆ ಹೋಗಾನಾ ಅಂತ ಹೇಳಿ ನಿಂತುಬಿಟ್ಟೆ.

ಸು.ಹೆ. :– ಯಾರಿಗೆ ಹೇಳಿದ್ಯೋ?

ವೆಂಕಣ್ಣ:– ನಿಮ್ಮ ಹೊಲೇರಿಗೆ ಹೇಳಿದ್ದೆ.

ಸು.ಹೆ :– ನೀ ಒಳ್ಳೆ ಗಿರಾಸ್ತ. ಅವರು ತ್ವಾಟದ ಬೇಲಿ ಮಾಡಾದ ಬಿಟ್ಕಂಡು ನಿನ್ನ ಹಂದಿ ಹೊರಾಕೆ ಬರ್‍ತಾರೆ? ನೀ ಒಳ್ಳೆ ಗಿರಾಸ್ತ''[೨]

ಇಲ್ಲಿ ಗಿರಾಸ್ತ, ಬತ್ತೀನಿ, ಮಾಡಾದ್ರಾ? ಹೂ.. ತು...ಶಬ್ದ ಪ್ರಯೋಗಗಳನ್ನು ನೋಡಬಹುದು. ವ್ಯಕ್ತಿಗಳ ಬಾಂಧವ್ಯ, ಭಾವನೆಗಳ ಅಭಿವ್ಯಕ್ತಿ ಯಾವುದೇ ಅಶ್ಲೀಲತೆ, ಕೃತ್ರಿಮತೆ, ಇಲ್ಲದೆ ನಿಸರ್ಗ ಸಹಜ ಭಾಷಾ ಲಕ್ಷಣಗಳನ್ನು ನೋಡಬಹುದು.

''ಆಳುಗಳಿಗೂ ಹೆಗ್ಗಡೆಗಳೂ ಇರುವ ಸಂಬಂಧವನ್ನು ಎರಡೂ ಕಾದಂಬರಿಗಳಲ್ಲಿ ಕಾಣುತ್ತೇವೆ. ಕಾನೂರು ಹೆಗ್ಗಡಿತಿಯಲ್ಲಿ ಬರುವ ವಾಸು ಗಂಗನನ್ನು ಬೇಟೆಗ ಕರೆದೊಯ್ಯುವ ಸಂಬಂಧದಲ್ಲಿ ''ಸೇಸಿ ಗಂಗನ್ನ ಕರಕೊಂಡು ಹೋಗ್ತೀನೇ, ಸ್ವಲ್ಪ ಕೆಲ್ಸಾ ಇದೆ'' ಎಂದನು. ಸೇಸಿ 'ಆಯ್ತಯ್ಯ' ಎಂದು ಬಿಡಾರದ ಒಳಗೆ ಹೋದಳು.''

ವಾಸು ಸೇಸಿಗಿಂತಲೂ ಚಿಕ್ಕವನಾಗಿದ್ದರೂ ಏಕವಚನದಲ್ಲಿ ಮಾತನಾಡಿಸುತ್ತಾನೆ. ಸೇಸಿಯು ಚಿಕ್ಕವನಾದ ವಾಸುವಿಗೆ ಬಹುವಚನದಲ್ಲಿ ಮಾತನಾಡಿಸುತ್ತಾಳೆ. ಇದು ಸಾಮಾಜಿಕ ಸ್ಥಾನಮಾನದ ಸಂಬಂಧವನ್ನು ತಿಳಿಸುತ್ತದೆ. ಅದೇ ರೀತಿ ಸೇರೆಗಾರ ಹಳೆಪೈಕದ ತಿಮ್ಮನಲ್ಲಿ ಹೊಲೆಯರಲ್ಲಿ ಮಾತನಾಡುವಾಗಲೆಲ್ಲ ಆಜ್ಞೆ ತಾತ್ಸಾರ ರೂಪಗಳನ್ನು ಕಾಣುತ್ತೇವೆ.

---

೧. ಕಾನೂರು ಹೆಗ್ಗಡಿತಿ – ಪುಟ ೭೦-೭೧
೨. ಮಲೆಗಳಲ್ಲಿ ಮದುಮಗಳು – ಪುಟ ೪೭

ಮಲೆನಾಡಿನಲ್ಲಿ ವ್ಯಾಪಾರಕ್ಕೆ ಬಂದ ಬ್ಯಾರಿಗಳು (ಮುಸ್ಲಿಂ), ಪಾದ್ರಿಗಳಾಗಿ ಬಂದ ಕ್ರಿಶ್ಚಿಯನ್‌ರು ಆಡುವ ಮಾತುಗಳಲ್ಲಿ ಅವರ ಗುಣ ಸ್ವಭಾವಗಳ ಪರಿಚಯ ಅನ್ಯಭಾಷಿಕ ಪದಗಳ ಬಳಕೆ ಕಾಣುತ್ತೇವೆ. ಉದಾ:– ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಬರುವ ಮುಸಲ್ಮಾನರ ಕನ್ನಡವನ್ನು ಗಮನಿಸಿ : ''ಎಷ್ಟು ದಿನಾ ನೀನು ನನ್ನ ಸತಾಯಿಸುವುದು? ನಿಮ್ಮದು ಹೆಗ್ಗಡೇರು ಕೊಟ್ಟರೆ ಕೊಡಲಿ, ಬಿಟ್ಟರೆ ಬಿಡಲಿ, ಒಟ್ನಾರೆ ನಮಗೆ ನಮ್ಮ ದುಡ್ಡು–ಕಾಸು ಬಂದರೆ ಸೈ! ಆಗಲಿ ನೀನು ಹೇಳಿದ ಹಾಗೆ ಇನ್ನು ಎಂಟು ದಿನ ನೋಡ್ತೀನಿ. ದುಡ್ಡು ಬಡ್ಡಿ ಬರದೇ ಹೋದರೆ ನಾನು ಹೆಗ್ಗಡೆಯವರ ಬಳಿಗೆ ಬರುತ್ತೆ! ನನಗೂ ಕೆಲಸವುಂಟು ಅವರಲ್ಲಿ! ಗೊತ್ತಾಯಿತ್ತ''[೧]

ಮಲೆಯಾಳಿ ಕುತ್ರಾಟುದಾರ ಕಣ್ಣಾ ಪಂಡಿತನು ಗುತ್ತಿಯನ್ನು ಕುರಿತು ಮಾತನಾಡುವಾಗ ಬಳಸುವಂತಹ ಕನ್ನಡ ಪದಗಳನ್ನು ಗಮನಿಸಬಹುದು : ''ಏನೋ ಕುತ್ತಿ ಮತುವೆಯಮಕನ ಹಾಂಗೆ ಬಟ್ಟೆಯುಟ್ಟು ಹೊರಟಿದ್ದೀಯಲ್ಲೊವೋ, ಹೆಣ್ಣುಕೇಳುತ್ತಿದ್ದೀಯಲ್ಲವೆ? ಬೆಟ್ಟುಳ್ಳಿ ದೊಡ್ಡಬೀರನ ಮಗಳು ತಿಮ್ಮಿಯನ್ನು ಒಪ್ಪಿಗೆಯಾಯಿತೋ''[೨]

ಇಲ್ಲಿ ಕಣ್ಣಾ ಪಂಡಿತನು ವ್ಯಂಜನ ವ್ಯತ್ಯಾಸ ಮಾಡುವುದನ್ನು ನೋಡಬಹುದು 'ಗ' ಕಾರಕ್ಕೆ ಬದಲಾಗಿ 'ಕ' ಕಾರವನ್ನು 'ವ' ಕಾರಕ್ಕೆ ಬದಲಾಗಿ 'ಮ'ಕಾರ ಬಳಸುವುದನ್ನು ಕಾಣುತ್ತೇವೆ.

ಹಾಗೆಯೇ ಪಾದ್ರಿ ಮತ್ತು ಕಣ್ಣಾ ಪಂಡಿತ ಮಾತನಾಡುವ ಸಂದರ್ಭ –

''ಪಾದ್ರಿ : ಇದು ಏನು, ಕಣ್ಣಾ ಪಂಡಿತರೆ? ಏಕೆ ಹೀಂಗೆ ಅಗೆಸಿಯಿದ್ದೀರಲ್ಲಾ?

ಕ.ಪಂ. : ಇದು ಅಗೆಸಿತ್ತಲ್ಲ ಪಾತ್ರಿಗಳೆ, ರಾತ್ರಿ ಕಾಲತ್ತಲ್ಲಿ ಹಂತಿ ಉಪ್ಪಿತ್ತಲ್ಲಾ?

ಪಾದ್ರಿ : ಇದೇನು ಪಂಡಿತರೇ ಸ್ಕೂಲೋ ಕೊಟ್ಟಿಗೆಯೋ?

ಕ.ಪಂ. : ಹಾಳು ಈ ತನಕಾಯುವ ಕುರಿ ಕಾಯುವ ಮುಂಡೆ ಮಕ್ಕಳಿಂದ ಸುಕಾ ಇಲ್ಲ... ಹೇಳಿ ಹೇಳಿ ಸಾಕಾಯಿತು ಈ ಸೂಳೆ ಮಕ್ಕಳಿಗೆ...... ! ಈ ಲವಡಿ ಮಕ್ಕಳು ಹ್ಯಾಂಗೆ ಒಳಗೆ ತನಾ. ಕುರಿ ಬಿಡ್ತಾರೆ ನೋಡುವ''[೩]

ಇಲ್ಲಿ 'ಕ' ಕಾರಕ್ಕೆ ಬದಲಾಗಿ 'ಗ' ಕಾರವನ್ನು (ಕ > ಗ) ಇನ್ನೂ ಕೆಲವೊಮ್ಮೆ 'ಗ' ಕಾರಕ್ಕೆ ಬದಲಾಗಿ 'ಕ' ಕಾರವನ್ನು (ಗ > ಕ) ಹಾಗೆಯೇ 'ದ' ಕಾರದ ಬದಲಾಗಿ 'ತ' ಕಾರವನ್ನು (ದ > ತ) ಬಳಸಿರುವುದನ್ನು ಕಾಣಬಹುದು.

ಈ ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ಕ್ರಿಶ್ಚಿಯನ್ನರು ಶಿಷ್ಟ ಭಾಷೆಯನ್ನೇ ಬಳಸಿರುವಂತ ಸಂದರ್ಭಗಳಿವೆ. ''ಉಪದೇಶಿಗಳೆ, ಕ್ರಿಸ್ತಸ್ವಾಮಿಯ ಸಂದೇಶವನ್ನು ಕ್ರೈಸ್ತೋಚಿತವಲ್ಲದ ವಿಧಾನಗಳಿಂದ ಪ್ರಚಾರ ಮಾಡಲು ನೀವು ಹೊರಟಿರಾದರೆ, ಜನರನ್ನು ಮೈಮೇಲೆ ಹಾಕಿಕೊಂಡು ತದ್ವಿರುದ್ಧ ಪರಿಣಾಮಕ್ಕೆ ಭಾಜನರಾಗುತ್ತೀರಿ. ನಾನು ನಮ್ಮ ಸ್ವಾರ್ಥ ಉದ್ದೇಶಗಳನ್ನೆಲ್ಲಾ ತ್ಯಜಿಸಿ, ಸತ್ತ್ವ ಮಾರ್ಗದಿಂದಲೇ

---

೧. ಮಲೆಗಳಲ್ಲಿ ಮದುಮಗಳು– ಕುವೆಂಪು, ಪುಟ ೭೭

೨. ಮಲೆಗಳಲ್ಲಿ ಮದುಮಗಳು– ಕುವೆಂಪು, ಪುಟ ೨೮

೩. ಮಲೆಗಳಲ್ಲಿ ಮದುಮಗಳು – ಕುವೆಂಪು, ಪುಟ ೨೭೩-೩೪

ಮುಂದುವರೆದು ಜನರ ನಂಬಿಕೆಗೆ ಪಾತ್ರರಾಗಬೇಕು. ಅವರ ವಿಶ್ವಾಸ ಲಭಿಸಿದ ತರುವಾಯವೇ ಅವರು ನಮ್ಮ ಉಪದೇಶಕ್ಕೆ ಕಿವಿಗೊಡುತ್ತಾರೆ. ಔಷಧೋಪಚಾರ ವಿದ್ಯಾಭ್ಯಾಸ ಮೊದಲಾದ ಸಹಾಯಗಳ ಮೂಲಕ ಅವರ ಹೃದಯವನ್ನು ನಾವು ಗೆಲ್ಲಬೇಕು. ಅವರ ಮತೀಯ ಮೌಢ್ಯಗಳಿಂದ ಅವರಿಗಾಗುತ್ತಿರುವ ಅಪಾಯಗಳನ್ನು ಉಪಾಯವಾಗಿ ಅವರಿಗೆ ಮನದಟ್ಟಾಗುವಂತೆ ಮಾಡಬೇಕು...''[೧]

ಇನ್ನೂ ಅವಿದ್ಯಾವಂತ ಮನೆತನದ ಒಕ್ಕಲಿಗ ಹೆಂಗಸರು ಜಗಳವಾಡುವಾಗ ಬಳಸುವ ಮಾತುಗಳು ಅವರ ಸಂಸ್ಕೃತಿಯನ್ನು ಸಾರುತ್ತವೆಂದೇ ಹೇಳಬಹುದು.

''ಜಟ್ಟಮ್ಮ: ನಿನ್ನ ಕೊಡ್ತಾರಲ್ಲಾ ಹಂದಿ ಬಡ್ಡಿಗೆ!

ಲಕ್ಕಮ್ಮ: ಬರ್ತಾಳಲ್ಲಾ ನಿನ್ನ ಸವ್ತಿ ಹಂದಿ ಬಡ್ಡಿಯಿಂದ್ಲೆ!

ಜಟ್ಟಮ್ಮ: ನನ್ನ ಹೆಣ ಬೀಳ್ಬೇಕು ಆ ತಾಟಗಿತ್ತಿ ಈ ಮನೆಗೆ ಕಾಲಿಡಬೇಕಾದ್ರೆ. ನಾನು ಮಾಡಾದೆಲ್ಲ ಮಾಡೀನಲ್ಲ ಇನ್ನೆಲ್ಲ ಬರ್ತಾಳೆ ಅವ್ಳು.

ಲಕ್ಕಮ್ಮ: ಬರದಿದ್ರೇ... ಈ ಬಂಜೆ ಮುಂಡೇನ ಕಟ್ಟಕೊಂಡು ಗುಂಡಿ ಹಾರ್ತಾನೇನು ಅಣ್ಣಯ್ಯ?

ಜಟ್ಟಮ್ಮ: ನಿನ್ನ ಮಿಂಡನ ತಂಗಿ ಅಲ್ಲದಿದ್ರೆ ಇನ್ಯಾರೊ ಇಲ್ಲೇನು ಹೆಣ್ಣು? ನಿನ ಮಂಜಿ ಏನು ರತಿ ಅಂತಾ ಮಾಡೀಯಾ? ನಿನ್ನ ಗಂಡ ಆಗಾಂವ ಕರೀಹಂದಿ ಮುಸುಡಿಗೂ ಅವನ ತಂಗಿ ಅವಳ ಮುಸಡಿಗೂ ಏನು ಇಲ್ಲ ಯತ್ಯಾಸ! ಆ ಹೂವಳ್ಳಿ ಹೆಣ್ಣು ಚಿನ್ನದಂಥ ಹೆಣ್ಣು ಚಿನ್ನವನ್ನೇ ತರ್ತೀನಿ!

ಲಕ್ಕಮ್ಮ: ತಂದ್ಯಾ ಆದದ್ದು ಹಿಡುಕ ಕುನ್ನೀನೆ! ಯಾರು ಬ್ಯಾಡ ಅಂತಾರೆ?

ಜಟ್ಟಮ್ಮ: ಥೂ.. ನಿನ್ನ ಬಾಯಲ್ಲಿ ಹುಳು ಬಿದ್ದು ಹೋಗ! ಅವಳು ಹೇತು ಬಂದಲ್ಲಿ ನೀನು ಕೂತು ಬರಾಯೋಗ್ತೇ ಇದ್ಯೇನೆ?''[೨]

ಮೇಲೆ ಕಾಣಿಸಿದ ಸಂಭಾಷಣೆಯಲ್ಲಿ ಬೈಗುಳಗಳ ಬನಿಯನ್ನು ಆಡುನುಡಿಯ ಬಾಗು–ಬಳುಕು, ಅಂಕು–ಡೊಂಕು, ಮೊಟಗು–ಕುತುಗು – ಈ ನೆಲದಲ್ಲಿ ತಾಯಿ ಬೇರುಳ್ಳ ಚೇತನಕ್ಕೆ ಮಾತ್ರ ದಕ್ಕುವಂಥವು. ತಾಟಗಿತ್ತಿ, ಮುಸಡಿ (ಮೂತಿ–ಮುಖ) ಜಟಾಪಟಿ (ಹೊಡೆದಾಟ) ಹಂದಿ ಬಡ್ಡಿ (ಹಂದಿಗೂಡು) ದದ್ದು ಹಿಡುಕ ಕುನ್ನಿ (ಬಡಕಲು ನಾಯಿ) ಮುಂತಾದ ಶಬ್ದ ಪ್ರಯೋಗಗಳೂ ಬಾಯ್ಗೆ ಹುಳ್ಳು ಬಿದ್ದು ಹೋಗ ಎಂಬ ಬೈಗಳೂ ಕೊನೆಯಲ್ಲಿ ಬರುವ ಗಾದೆ ಮಾತೂ– ಎಲ್ಲವಿಷ್ಟು ಸಹಜವಾಗಿ, ಶಕ್ತಿಯುತವಾಗಿ, ಪಾತ್ರಗಳ ಸ್ವಭಾವವನ್ನು ಗುರುತಿಸಿಕೊಡುವಲ್ಲಿ ಸಹಾಯಕವಾಗಿದೆ. ಶೂದ್ರರಾದ ಗುತ್ತಿ–ತಿಮ್ಮಿಯರ ನಡುವೆ ಆತ್ಮೀಯತೆ, ಪ್ರೀತಿ, ಭಾವದ ಭಾಷೆಯನ್ನು ಕಾಣುತ್ತೇವೆ.

ಅಯ್ಯೋ ಅಯ್ಯೋ ಅಯ್ಯೋ! ಅದೇನು ಭಾವ ಅದೂ? ನೊರೆ ನೊರೆ ನೊರೆ ಹಾಲು! ಕಡ್ಲು ನಿಂತ್ಹಾಂಗೆ ಅದೆಯಲ್ಲಾ! ಕಾವಣಿ ಕಣೇ ಕಣಿವೆ ಕಾಣನೆಲ್ಲ ಮುಚ್ಚಿಬಿಟ್ಟದೆ''[೩]

ಭಾವನೆಯಷ್ಟೇ ಭಾಷೆ ಇಲ್ಲಿ ಹೊರಹೊಮ್ಮಿದೆ. ಇಂಥ ಅನೇಕ ರೂಪಗಳನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಇದೇ ರೀತಿಯ ಸಂಭಾಷಣೆ ಗೌಡರ ಸ್ತ್ರೀ ಪುರುಷರಲ್ಲಿ ಬಳಕೆಗೊಂಡಿರುವ ಭಾಷೆಯಲ್ಲಿ ಹಾಗೂ ಚಿನ್ನಮ್ಮ ಹೇಳುವ ಒಂದೊಂದು ಮಾತಿನಲ್ಲೂ ಮುಗ್ಧತೆ ಕಂಡುಬರುತ್ತದೆ.

---

೧. ಮಲೆಗಳಲ್ಲಿ ಮದುಮಗಳು– ಕುವೆಂಪು, ಪುಟ ೬೭೮

೨. ಮಲೆಗಳಲ್ಲಿ ಮದುಮಗಳು– ಕುವೆಂಪು, ಪುಟ ೧೨೯

೩. ಮಲೆಗಳಲ್ಲಿ ಮದುಮಗಳು– ಕುವೆಂಪು, ಪುಟ ೨೬೦

''ಚಿನ್ನಮ್ಮ: ನಂಗೊತ್ತು, ನೀವು ಯಾಕೆ ಹೋಗ್ತೀದೀರಿ ಅಂತಾ. ಬೆಟ್ಟಳ್ಳಿ ಅತ್ತಿಗೆಮ್ಮಗೆ ಕೊಟ್ಟಿದ್ದ ಮಾತನ್ನು ನಡೆಸಿಕೊಡುವುದಕ್ಕೆ! ಐತ ಹೇಳಿದನಂತೆ: ಪೀಂಚ್ಲು ಹೇಳಿತು ನಂಗೆ, ಖಂಡಿತಾ ಬೇಡ. ನೀವು ಕೋವಿ ತೆಗೆದುಕೊಂಡು ಹೋಗೋದು, ನಂಗೆ ಜೀವನೇ ಹಾರ್ತದೆ; ನೀವು ಯಾರನ್ನಾದರೂ ಕೊಂದ್ರೆ! ನಾನು ಕೋಣೆಗೆ ಬರಲಿಲ್ಲ ಎಂದು ನಿಮಗೆ ಸಿಟ್ಟಾಗಿದ್ರೆ ನನ್ನಸರೊ ತಪ್ಪಾಯ್ತು ಕಾಲಿಗೆ ಬೀಳ್ತೀನಿ, ಇವತ್ತು ಬಂದೇ ಬರ್ತೀನಿ... ಇನ್ನೊಂದು ತಿಂಗಳು ತಡೆದರೆ ಆಗೆ ಅಗ್ತದಲ್ಲಾ ಅಂತಾ... ಬರ್ಲಿಲ್ಲ!''

''ಇವತ್ತು ರಾತ್ರಿ ಬಂದೇ ಬರ್ತೀನಿ ಅಂತಾ ನೀನು ಹೇಳಿದ್ದು ಜ್ಞಾಪಕ ಇರಲಿ! ಮತ್ತೆಲ್ಲಾದ್ರೂ ಮರೆತುಬಿಟ್ಟೀಯೊ...ಏನು... ನೆಲ ನೋಡ್ತಾ ನಿಂತುಬಿಟ್ಟೆಯೆಲ್ಲಾ, ಚಿನ್ನಿ?... ನೀನು ಬಂದ್ರೆ ಅಲ್ಲಿನಡೆಯೋ ಕತೇನಲ್ಲ ಸ್ವಾರಸ್ಯವಾಗಿ ಹೇಳ್ತೀನಿ ಆಯ್ತಾ?''[೧]

ಮುಕುಂದಯ್ಯ ಚಿನ್ನಮ್ಮರ ಮುಗ್ಧವಾದ ಪ್ರೀತಿಯ ಮಾತುಗಳನ್ನು ತಿಳಿದು ಮುಕುಂದಯ್ಯ ಅಷ್ಟೇ ಪ್ರೀತಿಯಿಂದ ಮರು ಮಾತಾಡಿರುವುದು ಭಾಷಾ ಶೈಲಿಯು ಉತ್ತಮವಾಗಿರುವುದನ್ನು ಸೂಚಿಸುತ್ತದೆ.

ದೊಡ್ಡಣ್ಣ ಹೆಗ್ಗಡೆಯವರು ಮರಣ ಹೊಂದಿದಂತಹ ಸಂದರ್ಭದಲ್ಲಿ ಅವರ ಒಳ್ಳೆಯತನವನ್ನು ಕುರಿತು ಹಾಗೆಯೇ ಅವರ ತಮ್ಮ ತಿಮ್ಮಪ್ಪ ಹೆಗ್ಗಡೆಯ ಒರಟುತನವನ್ನು ಕುರಿತು ಮಾತನಾಡುವಂತಹ ಕೆಳಜಾತಿಯ ಜೀತದಾಳು ತಿಮ್ಮನು ಆಡುವ ಮಾತುಗಳನ್ನು ಗಮನಿಸುವುದಾದರೆ–

''ಈ ಸಣ್ಣ ಹೆಗ್ಗಡೇರ್ಹಾಂಗಲ್ಲ, ಅವರು ಒಂದು ಸಾರಿನೂ ಬೈದಿದ್ದು ನಂಗೆ ನೆನಪಿಲ್ಲ, ಏನು ವೈನಾಗಿ ಮಾತಾಡಿಸ್ತಿದ್ರು. 'ತಿಮ್ಮಾ, ಹಾಂಗೆ ಮಾಡಬ್ಯಾಡೋ ಹೀಂಗೆ ಮಾಡೋ' ಅಂತ ಬುದ್ಧಿ ಹೇಳ್ತಿದ್‌ತಿದ್ರೆ ಹೊರ್‍ತು ಒಂದು ಪೆಟ್ಟು ಹೊಡೀತಿರ್ಲಿಲ್ಲ.

ಒಂದು ಕೆಟ್ಟ ಬೈಗುಳ ಬರ್ತಿರಲಿಲ್ಲ ಅವರ ಬಾಯ್ಲಿ. ನಾನೊಂದು ಸರ್ತಿ ಏನಾತು ಅಂತೀಯಾ? ನಮ್ಮ ಬಿಡಾರಕ್ಕೆ ಯಾರೋ ನೆಂಟರು ಬಂದಾರೆ ಅಂತಾ ಬಾಯಿಗೆ ಹಾಕಾಕೆ ಒಂದೆಲ್ಡು ಈಳ್ಯೆದೆಲೆ ತರಾನ ಅಂತಾ ಮೆಲ್ಲಕೆ ಕದ್ದು ಹೋಗಿ ಅಡಕೆ ಮರಕ್ಕೆ ಒರಕಿ ಒಂದೆಲ್ಡು ಎಲೆ ಕುಯ್ದಿದ್ದೆ, ಹಾಳ್ ಬಳ್ಳಿ! ನನ್ನ ಜೊತೇನೆ ಹರಕೊಂಡು ಬಂದು ಬಿಡಾದೇನು? ಅಷ್ಟು ಹೊತ್ತಿಗೆ ಎಲ್ಲಿಂದ್ಲೊ ಏನೋ ಇಳಿದು ಬಂದ್ಹಾಂಗೆ ಬಂದೇ ಬಿಟ್ರು ಅವರು! ಇನ್ಯಾರಾದ್ರೂ ಆಗಿದ್ರೆ ನನ್ನ ಬೆನ್ನು ಮುರಿಯೊಂಗೆ ಕನಾತಿ ಕೊಡ್ತಿದ್ರು!''[೨]

ಈ ಮಾತಿನಲ್ಲಿ ನಮಗೆ ತಿಳಿದು ಬರುವ ಅಂಶವೇನೆಂದರೆ ಇಬ್ಬರು ವ್ಯಕ್ತಿಗಳ ನಡುವಿನ ಗುಣಸ್ವಭಾವಗಳನ್ನು ತಿಳಿಸುವುದರ ಜೊತೆಗೆ ಪ್ರಾದೇಶಿಕತೆಯ ಸೊಗಡನ್ನು ಸಹ ಸೂಚಿಸುವಂತಹ ಮಾತುಗಳೆನ್ನಬಹುದು.

---

೧. ಮಲೆಗಳಲ್ಲಿ ಮದುಮಗಳು–ಕುವೆಂಪು, ಪುಟ ೬೭೦-೬೭೧
೨. ಮಲೆಗಳಲ್ಲಿ ಮದುಮಗಳು–ಕುವೆಂಪು, ಪುಟ ೪೫೧

ಈ ಕಾದಂಬರಿಗಳಲ್ಲಿ ಬರುವ ಕೆಳವರ್ಗದ ಜನರ ಸಂಭಾಷಣೆಯಿಂದಾಯ್ದ ಪದಗಳನ್ನು ಗ್ರಂಥ ಭಾಷೆ ಅಥವಾ ಶಿಷ್ಟ ಭಾಷೆಯ ಪದಗಳೊಡನೆ ಹೋಲಿಸಿದಾಗ ಕಂಡುಬರುವ ಸ್ವರ, ವ್ಯಂಜನಗಳ ವ್ಯತ್ಯಾಸವನ್ನು ಈ ಕೆಳಕಂಡಂತೆ ಪಟ್ಟಿ ಮಾಡಬಹುದು.

ಸ್ವರ ವ್ಯತ್ಯಾಸಗಳು :

ಸ್ವರ ವ್ಯತ್ಯಾಸಗಳಲ್ಲಿ ಪ್ರಮುಖವಾಗಿ 'ಸ್ವರಾಗಮ' 'ಸ್ವರಲೋಪ' 'ವರ್ಣ ಪಲ್ಲಟ' 'ಅನುನಾಸಿಕೀಕರಣ' ಹಾಗೂ ಇತರ ಆಂತರಿಕ ವ್ಯತ್ಯಾಸಗಳನ್ನು ಕಾಣಬಹುದು.

ಸ್ವರಾಗಮ : ಉದಾ :– 'ಅ' ಮತ್ತು 'ಇ' ಎರಡು ಸ್ವರಗಳ ಆಗಮವಾಗಿದೆ.

ಉದಾ :– 'ಅ' ಸ್ವರಾಗಮಕ್ಕೆ --- ಪ್ರಾಂತ್ಯ > ಪರಾಂತ್ಯ
ಪ್ರಾಣ > ಪರಾಣ

'ಇ' ಸ್ವರಾಗಮಕ್ಕೆ --- ಬ್ರಾಹ್ಮಣರು > ಬಿರಾಂಬ್ರು
ಗ್ರಹಚಾರ > ಗಿರಾಚಾರ
ಬ್ರಾಂತು > ಬಿರಾಂತು

ಸ್ವರಲೋಪ : ಅ, ಇ, ಉ, ಸ್ವರಲೋಪವಾಗುತ್ತದೆ.

'ಅ' ಸ್ವರಲೋಪ

ಉದಾ :– ಗರತಿಯರು > ಗರ್ತೇರು, ಯೋಚನೆ > ಯೇಚ್ನೆ
ನನಗೆ > ನಂಗೆ ಹೊರಟ > ಹೊಳ್ಟ

'ಇ' ಸ್ವರಲೋಪ

ಉದಾ :– ಕಂಡಿತು > ಕಂಡ್ತು ಹೇಳಿದ್ದಾರೆ > ಹೇಳ್ಯಾರೆ
ಕತ್ತಲಾಯಿತು > ಕತ್ತಲಾತು ಸಾಕಾಯಿತು > ಸಾಕಾತು

'ಉ' ಸ್ವರಲೋಪ

ಉದಾ :– ಕರುಳ > ಕರ್ಳ

ವರ್ಣಪಲ್ಲಟ :

ಉದಾ :– ಪ್ರಯತ್ನ > ಪರ್ಯತ್ನ
ಪ್ರಸಾದ > ಪರ್ಸಾದ

ಅನುನಾಸಿಕೀಕರಣ :

ಉದಾ : ಅವ > ಅಂವ, ಭಾವಿ > ಭಾಂವಿ, ಗಾಯ > ಗಾಂಯ

ಸ್ವರಗಳ ಆಂತರಿಕ ವ್ಯತ್ಯಾಸಗಳು :

ಉದಾ : ಬಹಳ > ಬಾಳ, ನಂಬು > ನೆಂಬು, ಹಾಗಾದರೆ > ಹಂಗಾರೆ,

ಸನ್ಯಾಸಿ > ಸನ್ನೇಸಿ, ಮದುವಣಿಗ > ಮದೋಳಿಗ

ವ್ಯಂಜನ ವ್ಯತ್ಯಾಸಗಳು : ಸ್ವರಗಳಂತೆ ವ್ಯಂಜನಗಳಲ್ಲಿಯೂ ಸಹ ಆಗಮ, ಲೋಪ, ಆಂತರಿಕ ವ್ಯತ್ಯಾಸಗಳನ್ನು ನೋಡಬಹುದಾಗಿದೆ.

ವ್ಯಂಜನಾಗಮ : ನ, ವ, ಶ, ವ್ಯಂಜನಗಳು ಆಗಮವಾಗಿರುವುದಕ್ಕೆ ಉದಾಹರಣೆ.

'ನ' ಕಾರಾಗಮ : ಹಾಗೇನು > ಹಾಂಗೇನು

ಹಾಗಲ್ಲ > ಹಾಂಗಲ್ಲ

'ವ' ಕಾರಾಗಮ : ಹೋದರು > ಹ್ವಾದ್ರು

'ರ' ಕಾರಾಗಮ : ಶವ > ಶ್ರವ

ವ್ಯಂಜನಲೋಪ : ಯ, ವ, ಹ ಮತ್ತು ಸ ವ್ಯಂಜನಗಳು ಲೋಪವಾಗಿರುವುದನ್ನು ನೋಡಬಹುದು.

ಉದಾ : ಯಂತ್ರ > ಅಂತ್ರ, ಒಡೆಯರು > ಒಡೇರು, ಮದುವೆ > ಮದೆ,

ವ್ಯವಹಾರ > ಯವಾರ, ಎಷ್ಟು > ಏಟು

ವ್ಯಂಜನಗಳ ಆಂತರಿಕ ವ್ಯತ್ಯಾಸಗಳು :

ಉದಾ : ತಕೋ > ತಣ, ಪಾದ್ರಿ > ಪಾತ್ರಿ, ಔಷಧಿ > ಜಾಂಸ್ತಿ,

ಹೋದರಪ್ಪ > ಹೋಪರಪ್ಪ, ಜನ್ಮ > ಜಲ್ಮ,

ಮರ್ಯಾದೆ > ಮರ್‍ವಾದೆ,

ಹೊರಡಿ > ಹೊಲ್ಡಿ, ಏಳರಿ > ಏಳಿನಿ,

ತಮಾಷೆ > ತಮಾಸೆ, ಬಹುದು > ಬಯ್ದೆ,

ಬೆಳಕೊ > ಬೆಣಗು

ಈ ಮೊದಲಾದ ವ್ಯತ್ಯಾಸಗಳನ್ನು ಅವರ ಸಂಭಾಷಣೆಯಲ್ಲಿ ನೋಡಬಹುದಾಗಿದೆ.

ತಮ್ಮ ಪೂರ್ವಜರ ಆಚಾರ–ವಿಚಾರಗಳನ್ನು ಬಿಡದೆ ಒಂದು ರೀತಿಯ ಮಡಿಯಿಂದ ಜೀವನವನ್ನು ನಡೆಸಿದಂತಹ ಶಂಕರ ಹೆಗ್ಗಡೆಯು ಬಳಸುವ ಭಾಷೆಯನ್ನು ಗಮನಿಸಿದರೆ ಯಾವ ಬ್ರಾಹ್ಮಣರಿಗೂ ಕಡಿಮೆ ಇಲ್ಲದೆ, ಪರಂಪರಾಗತವಾಗಿ ಬಂದ ನಂಬಿಕೆ–ಆಚರಣೆಗಳನ್ನು ಅಪ್ಪಿಕೊಂಡು, ಅದರಂತೆ ಜೀವನ ಸಾಗಿಸುವ ಶಂಕರ ಹೆಗ್ಗಡೆಯಲ್ಲಿರುವ ಮೌಢ್ಯತೆಯನ್ನು ಸ್ಪಷ್ಟಪಡಿಸಬಹುದು –

''ದೇವಸ್ಥಾನಕ್ಕೆ ಹೋಗ್ತಾರೋ ದೇವರ ಸೇವೆಗೆ ? ಹೊಲೇರವನ್ನು ಗಾಡಿ ಹೊಡೆಯೋಕೆ ಕೂರಿಸಿಕೊಂಡು ಏನು ಮಡಿಯಾಗ ಹೋಕ್ತಾರೋ ದೇವರ ಸೇವೆಗೆ ? ನಮ್ಮನ್ನೂ ಬೇರೆ ಗಾಡಿ ಹತ್ರೀ ಅಂತಾರೆ ? ನಮಗೆ ಇರೋ ರ್‍ವಾತೇನೇ ಸಾಲದು ? ಇನ್ನು ಅವರ ಸಂಗಡ ಮಡಿಗೆಟ್ಟು ಹೋಗಿ, ದೇವರು ಮುನಿದಾ ಅಂದ್ರೆ ಮುಗೀತು. ನಮ್ಮ ಗತಿ ! ಈ ಅನಾಚಾರನ್ನೆಲ್ಲಾ ಹ್ಯಾಂಗೆ ಸಹಿಸ್ತಾರೋ ಆ ಭಗವಂತ ? ಅವನಿಗೇ ಗೊತ್ತು!.. ಹ್ನೂ! ನಡಿಯೋ ರಾಮು ಇನ್ನು ದಣಿವು ಆರಿಸಿಕೊಂಡಿದ್ದು ಆಯ್ತಲ್ಲಾ! ಯಾಕೆ ನಿಂತೀಯೋ ? ನಡಿಯೋ ? ನಿಂಗೆ ಆಗ್ದೆ ಇದ್ರೆ ಕೆಂಪೀ ಕೈಲಿ ಕೊಡೇಬಾಲೇನ.....''[೧]

''ಆ ಗುಡ್ಡ ಹತ್ತುವಾಗ ಒಂದಿಷ್ಟು ದಣಿವಾಗಿತ್ತು ನಿಜ. ಇನ್ನೇನು ಇಳಿಜಾರಿನಲ್ಲಿ ಜಾರಿಕೊಂಡು ಹೋಗಾದಷ್ಟೆ.''[೨]

---

೧. ಮಲೆಗಳಲ್ಲಿ ಮದುಮಗಳು– ಕುವೆಂಪು, ಪುಟ ೪೧೨

೨. ಮಲೆಗಳಲ್ಲಿ ಮದುಮಗಳು– ಕುವೆಂಪು, ಪುಟ ೨೮೨

ಹುಲಿಕಲ್ ನೆತ್ತಿಯಲ್ಲಿ ಐಗಳೊಡನೆ ಸುಬ್ಬಣ್ಣಹೆಗ್ಗಡೆ ಆಡುವ ಮೇಲಿನ ಮಾತು ತುಂಬಾ ಸೂಚ್ಯವಾಗಿವೆ. ಗುಡ್ಡ ಮತ್ತು ಇಳಿಜಾರು ಶಬ್ದಗಳು ಜೀವನಕ್ಕೆ ಸಂಕೇತಗಳಾಗಿವೆ. ಗುಡ್ಡ ತಾರುಣ್ಯಕ್ಕೆ ಇಳಿಜಾರು ಮುಪ್ಪಿಗೆ ಸೂಚ್ಯವಾಗಿದೆ. ಗುಡ್ಡದ ಏರಿವಿಕೆ ನಿಧಾನವನ್ನು ಸೂಚಿಸಿದರೆ 'ಹತ್ತು' ಕ್ರಿಯಾಪದ ಹತ್ತುವುದರಗಟ್ಟಿ ಮುಟ್ಟಾದ ತೊಡೆಯ ತಾಕತ್ತನ್ನು ಸೂಚಿಸುತ್ತದೆ. ಇಳಿಜಾರು ವೇಗವನ್ನು ಸೂಚಿಸಿದರೆ 'ಜಾರು' ಎಂಬ ಕ್ರಿಯಾಪದ ತೊಡೆಯಲ್ಲ ತಾಕತ್ತಿರುವ ನಿಶ್ಯಕ್ತಿಯನ್ನು ಸೂಚಿಸುತ್ತದೆ. ಆದ್ದರಿಂದ ಸುಬ್ಬಣ್ಣ ಹೆಗ್ಗಡೆಯವರ ಮಾತು ತುಂಬಾ ಸೂಚ್ಯವಾಗಿದ್ದು, ಮನನ ಮಾಡಿದಂತೆಲ್ಲ ಅದರ ಸೂಕ್ಷ್ಮತೆ, ಮನಸ್ಸನ್ನು ಆಕರ್ಷಿಸುತ್ತದೆ, ಭಾಷೆಯ ಧ್ವನಿಪೂರ್ಣ ಬಳಕೆಗೆ ಇದು ನಿದರ್ಶನವಾಗುತ್ತದೆ.

ಈ ಕಾದಂಬರಿಗಳಲ್ಲಿ ಬರುವ ಎಲ್ಲ ಪಾತ್ರಗಳೂ ಒಂದೇ ರೀತಿಯಾಗಿ ಕಾಣಿಸಿಕೊಳ್ಳುತ್ತವೆ. ಕಾದಂಬರಿಕಾರರೇ ಹೇಳುವ ಹಾಗೆ ಎಲ್ಲವೂ ಸಮಾನವಾದುದು, ಇಲ್ಲಿ ಮನುಷ್ಯನಿಗೆ ಎಷ್ಟು ಪ್ರಾಮುಖ್ಯವೋ ಅಷ್ಟೇ ಸಮನಾದ ಸ್ಥಾನವನ್ನು ಗುತ್ತಿಯ ನಾಯಿ ಹುಲಿಯನಿಗಿದೆ. ಅದೂ ಸಹ ಸ್ಥಾನವನ್ನು ಗುತ್ತಿಯ ನಾಯಿ ಹುಲಿಯನಿಗಿದೆ. ಅದೂ ಸಹ ಕಾದಂಬರಿಯಲ್ಲಿ ಪ್ರಮುಖ ಪಾತ್ರ ವಹಿಸಿರುವುದನ್ನು ಗಮನಿಸಬಹುದು.

''ಹುಲಿಯನೂ ಒಡೆಯನಿಗೆ ಸಮೀಪದಲ್ಲಿ ಬೆಚ್ಚಗೆ ಬಿಂಕಿ ಕಾಯಿಸುತ್ತಾ ಅರೆಗಣ್ಣು ಮಾಡಿಕೊಂಡು ನೋಡುತ್ತಾ, ಹೊಟ್ಟೆಯಡಿಯಾಗಿ ಮುನ್ನೀಡಿದ ಮುಂಗಾಲುಗಳ ಮೇಲೆ ಮೊರೆಯಿಟ್ಟು ಮಲಗಿಕೊಂಡಿತು''[೧]



ಕುವೆಂಪು ಅವರ ಇಂಥ ನಿರೂಪಣೆಯ ಭಾಗದಲ್ಲೂ ಒಂದು ಸಂದರ್ಭವನ್ನು ಭಾಷೆಯ ಮುಖಾಂತರ ಎಷ್ಟು ಸಚಿತ್ರವಾಗಿ ಚಿತ್ರಿಸಬಲ್ಲರು ಎಂಬುದಕ್ಕೆ ಮೇಲಿನ ಹೇಳಿಕೆ, ನಿದರ್ಶನ. ಕೊನೆಯ ಸಾಲಿನ ಅನುಪ್ರಾಸ ಎಷ್ಟು ಸಹಜವಾಗಿ ಅಪ್ರಯತ್ನಪೂರ್ವಕವಾಗಿ ಭಾವಾನುಸಾರಿಯಾಗಿ ಬಂದಿದೆ ಎನ್ನುವುದನ್ನು ಗಮನಿಸಬಹುದು.

ಕಾದಂಬರಿಗಳಲ್ಲಿ ಬರುವ ಸಂಭಾಷಣೆಗಳು ಪಾತ್ರ ಸ್ವಭಾವದ ಜತೆಗೆ ಸಂಬಂಧವನ್ನು ಕಲ್ಪಿಸಿಕೊಳ್ಳುತ್ತವೆ. ಆಯಾ ಸ್ತರದ ಪಾತ್ರಗಳ ಭಾಷಾ ಭಿನ್ನತೆ ಉಂಟುಮಾಡುವ ಅಕೃತಕ ವಾತಾವರಣದಿಂದಾಗಿ ನಿಜಜೀವನದ ವ್ಯಕ್ತಿಗಳ ಸಂಭಾಷಣೆಗಳನ್ನು ಕೇಳುವಂತೆಯೇ ಭಾಸವಾಗುತ್ತದೆ. ಕ್ರಿಯೆ ಹಾಗೂ ಸಂಭಾಷಣೆ ಜೊತೆ ಜೊತೆಯಾಗಿ ನಡೆಯುವಾಗ ಸಂಭಾಷಣೆಯಲ್ಲಿ ತರುವ ಕ್ರಿಯೆಯ ಕೌಶಲ್ಯ ಪಾತ್ರಗಳ ಮನಸ್ಸನ್ನು ಹೊರ ತೆಗೆಯುತ್ತದೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯ ಮೊದಲಲ್ಲಿ ಬರುವ ಗುತ್ತಿ ಸೇಸನಾಯ್ಕರ ಸಂಭಾಷಣೆ ಇಬ್ಬರ ವ್ಯಕ್ತಿತ್ವಕ್ಕೂ ಭೂತಗನ್ನಡಿ ಹಿಡಿಯುತ್ತದೆ.

''ಇದೇನೇ ? ಈಟೊತ್ತಿನಾಗ ? ಈ ಮಳೇಲಿ? ಎಂದು ಸೇಸನಾಯ್ಕ ಕೇಳದಕ್ಕೆ ಮಾಂಸದ ಪಲ್ಯದ ವಾಸನೆಯನ್ನು ಕಳ್ಳು ಹೆಂಡಗಳ ಹುಳಿಗಂಪನ್ನು ಮೂಗಾಳಿ ಹಿಡಿದು ಮನಸ್ಸಿನಲ್ಲಿಯೇ

---

೧. ಮಲೆಗಳಲ್ಲಿ ಮದುಮಗಳು–ಕುವೆಂಪು, ಪುಟ ೧೭

ಸಂತೋಷಡುತ್ತಿದ್ದ ಗುತ್ತಿ ಪೆಚ್ಚು ಪೆಚ್ಚಾಗಿ ನಗುತ್ತಾ ನಿರ್ನಿಮಿತ್ತವಾಗಿ ತೊಡೆ ತುರಿಸಿಕೊಳ್ಳುತ್ತಾ ಏನಿಲ್ಲ ಕಣ್ರೋ ! ಮಳೆ ಹೊಡಿತೊ ಹೊಡಿತೊ! ಕಾದೂ ಕಾದೂ ಸಾಕಾಯ್ತು ಎಂದು ಪ್ರಶ್ನೆಯನ್ನು ಒಂದಿನಿತೂ ಲೆಕ್ಕಿಸದೇ ಮಾತನಾಡುವುದು, ಅಷ್ಟೇನೂ ಹಸಿವಿಲ್ಲ ಸೋಲೂ ಪದವಾಗರೆ ಎಂದು ತನ್ನ ಹಸಿವನ್ನು ಪರೋಕ್ಷವಾಗಿ ಪ್ರಕಟಿಸುವುದು.

ಕಾಗಿನಹಳ್ಳಿ ಸೀಮೆಯಲ್ಲಿ ಆಹಾರದ ಹಂಚಿಕೆಯಲ್ಲಿ ಹುಲಿಯನಿಗೂ ಗುತ್ತಿಗೂ ನಡೆಯುವ ಸೂಕ್ಷ್ಮ ಸಂಘರ್ಷ ಅವನ ಪ್ರವೃತ್ತಿಮಯ ಬದುಕನ್ನು ದೃಷ್ಟೀಕರಿಸುತ್ತದೆ. ಹಾಗೆಯೇ ಮೋರೆಯನ್ನು ನೋಡಿ ಅಸಹ್ಯಪಟ್ಟುಕೊಂಡು ಕಾಡಿ ಕೇಳಿರಕ್ಕೆ ಇಲುಗಿನ ಚೂರು ಅನ್ನುವುದು ಇತ್ಯಾದಿ ಗುತ್ತಿಯ ಸ್ವಭಾವ ದರ್ಶನಕ್ಕೆ ನಿದರ್ಶನವಾಗಿದೆ.

ಈ ಕಾದಂಬರಿಗಳುದ್ದಕ್ಕೂ ಪುನರುಕ್ತಿಗಳನ್ನು ಯಾವುದೇ ಅಡೆತಡೆ ಇಲ್ಲದೆ ಸಲೀಸಾಗಿ ಬಳಸಿರುವುದನ್ನು ಗಮನಿಸಬಹುದು.

ಉದಾ :– ಮಳೆ ಸಂಪೂರ್ಣವಾಗಿ ನಿಂತಿತ್ತು. ತೊರೆಯ ಮೊರೆ ಮೊದಲಿನಷ್ಟು ಇರಲಿಲ್ಲ ಮಳೆ ತೊರೆಗಳ ಜಲಘೋಷದಲ್ಲಿ ಹಿಂದೆ ಕೇಳಿಸದಿದ್ದ ಕಪ್ಪೆಗಳ ವಟಗುಟ್ಟುವಿಕೆ ಚಿತ್ರವಿಚಿತ್ರವಾಗಿ ಕೃತವಿಕೃತವಾಗಿ ಕೇಳಿಸುತ್ತಿತ್ತು, ಗಾಳಿ ಬೀಸಿದಂತೆಲ್ಲಾ ಮರದ ಹನಿ ಪಟಪಟನೆ ಉದುರುತ್ತಿತ್ತು, ಕಾಣಿಸದಿದ್ದರೂ ತೊರೆಯ ಕಡೆ ಕಣ್ಣಿಟ್ಟು ಯಾವ ಆಲೋಚನೆಯನ್ನು ಮಾಡದೆ, ಶೂನ್ಯ ಮನಸ್ಸಿನಿಂದ ತೊರೆಯ ಮೊರೆಯನ್ನು ಆಲಿಸುತ್ತಾ ಆಲಿಸುತ್ತಾ ತಾನೇ ತೊರೆಯ ಮೊರೆಯಾದೆನೋ ಎಂಬಂತೆ ಕುಳಿತಿದ್ದ ಗುತ್ತಿ ತಟಕ್ಕನೆ ಎಚ್ಚೆತ್ತು, ಮೂಗನ್ನು ಅರಳಿಸಿ ಮೂಸಿ ಮೂಸಿ ಗಾಳಿ ಹಿಡಿಯ ತೊಡಗಿದನು.''[೧]

ವ್ಯಕ್ತಿಗಳ ಸಂಭಾಷಣೆಯಲ್ಲಿ ಕಾದಂಬರಿಕಾರರ ನಿರೂಪಣೆಯಲ್ಲಿ ಭಾಷೆಯನ್ನು ಬಳಸಿದಂತೆಯೇ ಅನ್ಯಭಾಷೆಗಳಾದ ಸಂಸ್ಕೃತ ಹಾಗೂ ಇಂಗ್ಲಿಷ್‌ನ ಬಳಕೆಯನ್ನು ಜೊತೆಗೆ ಸಂಸ್ಕೃತ ಮಿಶ್ರಿತ ಹಳಗನ್ನಡ ಭಾಷೆಯನ್ನು ಹೇಗೆ ಯಾವ ಉದ್ದೇಶಗಳಿಗೆ ಬಳಸಿದ್ದಾರೆಂದು ತಿಳಿಯಬಹುದಾಗಿದೆ. ಪ್ರಕೃತಿಯ ಕಾವ್ಯಮಯ ವರ್ಣನೆಯಲ್ಲಿ ವ್ಯಂಗ್ಯಕ್ಕಾಗಿ ನಿಗೂಢ ವಿಷಯದ ಅನಾವರಣಕ್ಕಾಗಿ ವಿಶಿಷ್ಟಾನುಭವವನ್ನು ಸ್ವಾರಸ್ಯವಾಗಿ ನಿರೂಪಿಸುವುದಕ್ಕಾಗಿ ಲೈಂಗಿಕ ವರ್ಣನೆಗಾಗಿ ಹಾಗೂ ಮಹಾತ್ಮಾದುದರ ಅಭಿವ್ಯಕ್ತಿಗಾಗಿ ಸಂಸ್ಕೃತ ಮಿಶ್ರಿತ ಭಾಷೆಯನ್ನು ಬಳಸಿದ್ದಾರೆ ಎನ್ನಬಹುದು. ಉದಾ :– ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಹೂವಯ್ಯನ ಭಾವ ಸಮಾಧಿ ಎಂಬ ಅಧ್ಯಾಯದಲ್ಲಿ

''ನೋಡುತ್ತಿದ್ದ ಹಾಗೆಯೇ ನೀಲ ನಿರ್ಮಲವಾಗಿ, ಎಲ್ಲಿಯೋ ದೂರದೂರದಲ್ಲಿ ಒಂದೊಂದೆಡೆ ಮಾತ್ರ ಸಣ್ಣ ಸಣ್ಣ ಬೆಳ್ಮುಗಿಲುಗಳಿಂದ ಖಚಿತವಾಗಿದ್ದ ಆಕಾಶದೇಶವು ಸಜೀವವಾಯಿತು. ಆ ಕಿರಿಯ ಬಿಳಿಮುಗಿಲ ತೋಳಗಳ ಹಿಂಡಿನ ಬರುವಿಕೆಯನ್ನು ಕುರಿತು ಭಯಭ್ರಾಂತವಾಗಿ ಮೇವು ಬಿಟ್ಟು ಓಡುವ ಬಿಳಿಯ ಕಂಬಳಿ ಗುರಿಗಳ ಮಂದೆಯಂತೆ ದಿಕ್ಕು ದಿಕ್ಕಿಗೆ ಬೆದರಿ–ಬೆದರಿ ಧಾವಿಸಿದವು. ಅವುಗಳಿಗೆ ಬದಲಾಗಿ ಧೂಮವರ್ಣದ ಧೂಮರೂಪದ ಮಹಾಶಿಲಾ ಖಂಡಗಳಂತೆ ಮೃದು–ಕಠಿಣವಾಗಿದ್ದ

---

೧. ಮಲೆಗಳಲ್ಲಿ ಮದುಮಗಳು – ಕುವೆಂಪು, ಪುಟ ೯

ಮುಂಗಾರ್ಗಾಲದ ಕರಿಮುಗಿಲ ಸೇನೆ ಧೀರವಾಗಿ, ಗಂಭೀರವಾಗಿ ಭೀಷಣವಾಗಿ ವೇಗವಾಗಿ ನಭಸ್ಥಲವನ್ನೆಲ್ಲ ಆಕ್ರಮಿಸಿತು. ಗಾಡಿಯ ಹಿಂಭಾಗದಲ್ಲಿ ಕೂತಿದ್ದ ಹೂವಯ್ಯ ಆ ಸೌಂದರ್ಯ ರೌದ್ರಗಳ ಭೀಷಣ ಭವ್ಯತೆಯನ್ನು ನೋಡಿ ಉನ್ಮನಸ್ಕನಾದನು. ಪ್ರಕೃತಿಯ ಆ ಪ್ರಚಂಡ ಶಕ್ತಿಗಳ ತಾಂಡವ ಲೀಲೆಯಲ್ಲಿ ಮಾನವನ ಮಹಾದ್ವ್ಯಾಪಾರಗಳೂ ಕೂಡ ಕ್ಷುದ್ರಕ್ಷುದ್ರವಾಗಿ ತೋರತೊಡಗಿದವು.''[೧]

''ತೈಲಲಿಪ್ತ ವಿಭೂತಿ ಭೂಷಿತ ಕುಂಕುಮಾಂಕಿತ, ಜಪಾಸು, ಶೋಭಿತ ರುದ್ರ ವೇಷದ ನಾರಿ ಕೇಳವನಾಂತು ಕೈಯಲ್ಲಿ ನಿಂಗಹೊರವಂಟ !''[೨]

ಮೇಲಿನ ಮಾತುಗಳಲ್ಲಿ ಸಂಸ್ಕೃತ ಮಿಶ್ರಿತ ಹಳಗನ್ನಡ ಕಾವ್ಯಧಾಟಿಯ ಈ ಭಾಷೆಯನ್ನು ಸೋದ್ದಿಶ್ಯವಾಗಿ ಬಳಸಿರುವಂಥದು. ಅಂದರೆ ನಿಂಗ ತನ್ನ ಕಳುವಾದ ಪದಾರ್ಥಗಳನ್ನು ಪತ್ತೆಹಚ್ಚಲು ಭೂತರಾಯನ ಹೆಸರಿನಲ್ಲಿ ತೆಂಗಿನಕಾಯಿಯನ್ನು ಎಲ್ಲರ ಕೈಯಿಂದಲೂ ಮುಟ್ಟಿಸುವ ಮೂಢ ಆಚರಣೆಗೆ ಕೈಹಾಕಿಸಿದ್ದನ್ನು ವಿಡಂಬಿಸಲು ಇಂಥ ಶೈಲಿಯನ್ನು ಬಳಸಲಾಗಿದೆ.

''ತಾವೇ ಜಾತಕ ನೋಡಿ ನಿರ್ಣಯಿಸಿ ಕೊಟ್ಟಿದ್ದ ವಧೂವರರ ಮಂಗಳ ವಿವಾಹ ಮಹೋತ್ಸವವನ್ನು ಸಾಂಗವಾಗಿ ನೆರವೇರಿಸಲು ಅವರೇ ದೊಡ್ಡ ಮನಸ್ಸು ಮಾಡಿ ಮದುವೆ ಮಾಡಿಸುವ ಜೋಯಿಸರಾಗಿಯೂ ವಿಜಯ ಮಾಡಿದರು.''[೩]

ಹೂವಯ್ಯನ ಮೇಲಿನ ವೈಯಕ್ತಿಕ ದ್ವೇಷದಿಂದಾಗಿ ಅವನಿಗೆ ಸಾಲಾವಳಿ ಕೊಡುವುದಿಲ್ಲವೆಂದೂ ರಾಮಯ್ಯನಿಗೆ ನೂರಕ್ಕೆ ನೂರು ಕೂಡಿ ಬರುತ್ತದೆಂದೂ ನಾಟಕ ಮಾಡಿ ಹೂವಯ್ಯ ಮತ್ತು ಸೀತೆಯರ ಬದುಕಿಗೆ ಬೇಗೆಯಿಕ್ಕಿದ ವೆಂಕಪ್ಪಯ್ಯನ ವಂಚನೆಯನ್ನು ಬಯಲಿಗೆಳೆಯಲು ಇಂಥ ಸಂಸ್ಕೃತ ಮಿಶ್ರಿತ ಹಳಗನ್ನಡ ಭಾಷೆಯನ್ನು ಬಳಸಲಾಗಿದೆ.

ವ್ಯಕ್ತಿಯನ್ನು ಒಂದು ಸಾಮಾಜಿಕ ಗುಂಪಿನೊಂದಿಗೆ ಗುರುತಿಸುವುದು ಅಥವಾ ಅದರಿಂದ ಬೇರ್ಪಡಿಸುವುದು ಭಾಷಾ ವ್ಯತ್ಯಾಸದ ಪ್ರಮುಖ ಕಾರ್ಯಗಳಲ್ಲಿ ಒಂದು. ಎಲ್ಲರೊಡನೆಯೂ ಎಲ್ಲಾ ಸ್ಥಳಗಳಲ್ಲಿಯೂ ಒಂದೇ ಬಗೆಯ ಮಾತಿನ ಶೈಲಿಯನ್ನು ನಾವು ಬಳಸುವುದಿಲ್ಲ, ಅದು ಪರಿಸರಕ್ಕೆ ತಕ್ಕಂತೆ ಬದಲಾಗುತ್ತದೆ.

**********

೧. ಕಾನೂರು ಹೆಗ್ಗಡಿತಿ–ಕುವೆಂಪು, ಪುಟ ೧೯೩
೨. ಮಲೆಗಳಲ್ಲಿ ಮದುಮಗಳು – ಕುವೆಂಪು, ಪುಟ ೩೨೬-೩೫೫
೩. ಕಾನೂರು ಹೆಗ್ಗಡಿತಿ – ಕುವೆಂಪು, ಪುಟ ೪೭೮

## VI. ಭಾಷೆ ಮತ್ತು ಸಾಮಾಜಿಕ ಸಂಬಂಧಗಳು :

ಮಾನವ ಸಂಘ ಜೀವಿ ಎಂದು ಎಲ್ಲರಿಗೂ ತಿಳಿದೇ ಇದೆ. ಸಂಘ ಜೀವಿಯಾದ ಮಾನವನಿಗೆ ಭಾಷೆ ಸಂಪರ್ಕ ಸಾಧನವಾಗಿದೆ. ಭಾಷೆಯಿಂದಾಗಿ ಮಾನವ ಇತರರೊಂದಿಗೆ ಸಂಪರ್ಕವಿಟ್ಟುಕೊಳ್ಳಲು ಸಾಧ್ಯವಾಗಿದೆ. ಸಂಘ ಜೀವಿಯಾದ ಮಾನವ ಹಿಂದೆ ಒಂದು ನಿರ್ಧಿಷ್ಟ ಪ್ರದೇಶದಲ್ಲಿ ಗುಂಪಿನೊಂದಿಗೆ ವಾಸಿಸುತ್ತಿದ್ದರು. ಇವರಿಗೆ ಇತರರ ಸಂಪರ್ಕವಿರಲಿಲ್ಲ ಇವರ ಸಂಖ್ಯೆ ಕಡಿಮೆ ಇದ್ದು ಇವರ ಭಾಷೆಯು ಬೇಧಗಳನ್ನು ಹೊಂದದೆ ಒಂದೇ ಆಗಿತ್ತು ಎಂದು ಭಾವಿಸಬಹುದು. ಆದರೆ ಜನಸಂಖ್ಯೆ ವೃದ್ಧಿಯಾದಂತೆ ಸಮಾಜವೂ ಬೆಳೆದು ಹೆಚ್ಚು ಹೆಚ್ಚು ಪ್ರದೇಶವನ್ನು ಆಕ್ರಮಿಸಿಕೊಂಡ ಕಾರಣ ಈ ಪ್ರದೇಶಗಳ ನಡುವಿನ ಅಂತರ ಬೆಳೆಯಿತು.

ಸಮಾಜ ಬೆಳೆದಂತೆಲ್ಲಾ ಮಾನವನ ನಡುವಿನ ಸಂಪರ್ಕವು ಕಡಿಮೆಯಾಯಿತು. ಕಾಲಕ್ರಮೇಣ ಅವರ ಭಾಷೆಯಲ್ಲಿ ಅಂತರ ಕಂಡು ಬಂದಿತು. ಪ್ರಾರಂಭದಲ್ಲಿ ಉಪಭಾಷೆಗಳಾಗಿಯೂ ನಂತರ ತಮ್ಮದೇ ಆದ ಸ್ವತಂತ್ರ ಭಾಷೆಗಳಾಗಿಯೂ ಪರಿವರ್ತನೆಗೊಂಡವು. ಇಂತಹ ಸನ್ನಿವೇಶಗಳನ್ನು ಎಲ್ಲಾ ಭಾಷೆ ಗುಂಪುಗಳಲ್ಲೂ ಕಾಣಬಹುದು. ಹೀಗೆ ಇಂದಿನ ಯಾವುದೇ ಭಾಷಾ ಪರಿವಾರವನ್ನು ಅದರ ಮೂಲವಾದ ಒಂದು ಭಾಷೆಯಿಂದ ಕಾಲಾನುಕ್ರಮವಾಗಿ ಒಡೆದು ಉಂಟಾಗಿರುವುದಾಗಿ ಹೇಳಬಹುದು.

ಸಮಾಜ ಬೆಳೆದಂತೆಲ್ಲಾ ಮಾನವ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮತ್ತೊಂದು ಸಮಾಜದ ಸಂಪರ್ಕವಿರಿಸಿಕೊಂಡ ಕಾರಣ ಒಂದು ಸಮಾಜದ ಭಾಷೆಯ ಪ್ರಭಾವವು ಮತ್ತೊಂದು ಸಮಾಜದ ಭಾಷೆ ಮೇಲಾಗುವುದನ್ನು ಕಾಣಬಹುದು. ಭಾಷೆ ಎನ್ನುವುದು ಮಾನವ ತನ್ನ ಅಗತ್ಯಗಳ ಪೂರೈಕೆಗಾಗಿ ಸೃಷ್ಟಿಸಿಕೊಂಡಿದ್ದು ಅದು ಮಾನವನಿಗೆ ಅನುಕರಣೆಯಿಂದ ದೊರೆತದ್ದು. ಭಾಷಾ ನಿರ್ಮಾಣದಲ್ಲಿ ಸಮಾಜದ ಪಾತ್ರ ಮಹತ್ವದ್ದು. ಭಾಷೆಯ ಉಗಮ ವಿಕಾಸ ಸಮಾಜದ ಬೆಳವಣಿಗೆಯಲ್ಲಿ ಅದರ ಪಾತ್ರ ಸಂಸ್ಕೃತಿಯ ನಿರ್ಮಾಣದಲ್ಲಿ ಭಾಷೆಗಿರುವ ಸ್ಥಾನ ಮುಂತಾದವುಗಳನ್ನು ಕಂಡಾಗ ಭಾಷಾ ವಿಜ್ಞಾನವನ್ನು ಸಾಮಾಜಿಕ ವಿಜ್ಞಾನ ಎನ್ನುವುದು ಹೆಚ್ಚು ಸೂಕ್ತ ಎನ್ನಿಸುತ್ತದೆ.

ಭಾಷೆಯ ಮೂಲ ಉದ್ದೇಶ ಜನರ ನಡುವಿನ ವ್ಯವಹಾರವನ್ನು ಸುಲಭಗೊಳಿಸುವುದು ಮಾನವನ ಸಂಸ್ಕೃತಿ ನಾಗರಿಕತೆ ಮುನ್ನಡೆಯಲು ಸಹಕಾರಿಯಾಗಿದೆ ಮತ್ತು ವ್ಯಕ್ತಿ ವ್ಯಕ್ತಿಗಳ ನಡುವೆ ಸಾಮಾಜಿಕ ಸಹಕಾರವೇರ್ಪಡಿಸುತ್ತದೆ. ಭಾಷೆ ಸಮಾಜದಲ್ಲಿ ಹುಟ್ಟುತ್ತದೆ. ಭಾಷೆ ಬಳಸಿದರೆ ಉಳಿಯುತ್ತದೆ ಮರೆತರೆ ಸಾಯುತ್ತದೆ. ಒಬ್ಬ ವ್ಯಕ್ತಿಯ ಆಸ್ತಿಯಲ್ಲ ಅದು ಸಮಾಜದ ಅಸ್ತಿ.

ಪ್ರಾಚೀನ ತಲೆಮಾರುಗಳ ಸಂಸ್ಕೃತಿಯನ್ನು ಮತ್ತು ನಾಡವರ ಸಂಸ್ಕೃತಿಯ ನಾಗರಿಕತೆಗಳನ್ನು ಮುಂದಿನ ತಲೆಮಾರಿಗೆ ಕಾಯ್ದಿರಿಸುವ ಕಾರ್ಯವನ್ನು ಮಾಡುತ್ತದೆ. ಭಾಷೆಯ ಮೂಲಕ ಇತರ

ಜನಾಂಗಗಳ ನಡೆನುಡಿಗಳನ್ನು ದಾಖಲಿಸಬಹುದು. ಮನುಷ್ಯರ ನಡುವಿನ ಒಂದು ಮಾಧ್ಯಮವಾಗಿ ಭಾಷೆ ಕಾರ್ಯ ನಿರ್ವಹಿಸುತ್ತದೆ. ಭಾಷೆ ಎಲ್ಲರ ಸ್ವತ್ತು ಜನರ ಬಾಯಲ್ಲಿ ಎಲ್ಲಿಯವರೆಗೆ ಜೀವಂತವಾಗಿರುತ್ತದೆ ಅಲ್ಲಿಯವರೆಗೆ ಭಾಷೆ ಜೀವಂತವಾಗಿರುತ್ತದೆ.

ಭಾಷೆ ಸಾಮಾಜಿಕ ಪ್ರಕ್ರಿಯೆಯಾಗಿದೆ. ನಮ್ಮ ಸಾಮಾಜಿಕ ಶ್ರೇಣಿಗಳಲ್ಲಿ-ಕಾಲ ದೇಶ ಪರಿಸರಕ್ಕೆ ಅನುಗುಣವಾಗಿ ಅಭಿವ್ಯಕ್ತಿ ಮಾಧ್ಯಮವಾಗಿ ನಿಲ್ಲಬಹುದಾದ ಮಾಧ್ಯಮವೇ ಭಾಷೆ. ಸಮಾಜದಲ್ಲಿ ಮಾನವನ ವೈಯಕ್ತಿಕ ಸಿದ್ಧಿಸಾಧನೆಯಲ್ಲಿ ಭಾಷೆಯ ಸಿದ್ಧಿಯೂ ಒಂದಾಗಿದೆ. ಮನುಷ್ಯನ ಪ್ರತಿಯೊಂದು ವ್ಯವಹಾರದಲ್ಲಿ ಭಾಷೆಯ ಪಾತ್ರ ಮಹತ್ವದಾಗಿದೆ. ಸಮಾಜ ತನ್ನ ವ್ಯವಸ್ಥಿತ ಜೀವನ ನಡೆಸಲು ಭಾಷೆ ಬೇಕು, ಭಾಷೆ ಜೀವಂತವಾಗಲು ಸಮಾಜ ಬೇಕು. ಭಾಷೆ ಮತ್ತುಸಮಾಜ ಒಂದು ಬಿಟ್ಟು ಮತ್ತೊಂದು ಇರಲು ಸಾಧ್ಯವಿಲ್ಲ. ಭಾಷೆ ಸಾಮಾಜಿಕ ಅಧ್ಯಯನಕ್ಕೆ ಪೂರಕ ಮತ್ತು ಸಹಾಯಕವಾಗಿದೆ. ಸಾಮಾಜಿಕ ರಚನಾ ವಿನ್ಯಾಸವನ್ನು ಭಾಷೆಯ ಮೂಲಕ ಅದರ ವಿಶೇಷತೆಯನ್ನು ಅಧ್ಯಯನ ಮಾಡಲು ಸಾಧ್ಯವಾಗಿದೆ.

ಸಮಾಜದಲ್ಲಿ ವ್ಯಕ್ತಿ ತನ್ನಷ್ಟಕ್ಕೆ ತಾನು ಸ್ವತಂತ್ರನಲ್ಲ. ಸಮಾಜದ ಒಂದು ಅವಿಭಾಜ್ಯ ಅಂಗವಾಗಿರುತ್ತಾನೆ. ತಾನು ವಾಸಿಸುವ ಭಾಷಿಕ ಸಮುದಾಯದೊಂದಿಗೆ ದೈನಂದಿನ ವ್ಯವಹಾರ ನಡೆಯುತ್ತದೆ. ಸಮಾಜದಿಂದ ವ್ಯಕ್ತಿಯನ್ನು ವ್ಯಕ್ತಿಯಿಂದ ಭಾಷೆಯನ್ನು ಬೇರ್ಪಡಿಸಲು ಸಾಧ್ಯವಾಗದು. ಆಯಾಯ ಸಮಾಜದ ಸಮೂಹದ ಸಂಸ್ಕೃತಿ ಭಾಷೆಯೊಂದಿಗೆ ಬೆರೆತು ಭಾಷೆಯನ್ನು ಬೆಳೆಸುತ್ತದೆ. ವ್ಯಕ್ತಿಯು ತನ್ನ ಭಾವನೆಗಳನ್ನು ಭಾಷೆಯ ಮೂಲಕ ಸಮಾಜದೊಂದಿಗೆ ಹಂಚಿಕೊಳ್ಳುತ್ತಾನೆ. ಸಾಮಾಜಿಕ ಸಾಂಸ್ಕೃತಿಕ ಮೇಲ್ಮೈಯನ್ನು ಸಾಧಿಸಲು ಭಾಷೆಯ ಅವಶ್ಯಕತೆ ಮುಖ್ಯವಾಗಿದೆ. ಸಮಾಜದ ಬೆಳವಣಿಗೆ ಬದಲಾವಣೆಗೆ ಭಾಷೆ ಮುಖ್ಯವಾಗಿದೆ. ಅಲ್ಲದೆ ಭಾಷೆ ಸಮಾಜದ ಎಲ್ಲಾ ಅಂಗಗಳೊಂದಿಗೆ ಮಿಳಿತಗೊಂಡಿದೆ. ಅಷ್ಟೇ ಅಲ್ಲದೆ ಸಹಜತೆಯಿಂದ ಪೀಳಿಗೆಯಿಂದ ಪೀಳಿಗೆಗೆ ಭಾಷೆ ವ್ಯಕ್ತಿಯ ನಂಬಿಕೆಗಳನ್ನು ಆಚರಣೆಗಳನ್ನು ಸಂಪ್ರದಾಯಗಳನ್ನು ಸಾಮಾಜಿಕ ಕಾನೂನು ಮುಂತಾದವುಗಳನ್ನು ಜತನವಾಗಿ ಉಳಿಸಿಕೊಂಡು ಬರುವ ಕಾರ್ಯವನ್ನು ಭಾಷೆ ಮಾಡುತ್ತದೆ. ಸಮಾಜದ ರೀತಿ ನೀತಿಗಳನ್ನು ಖಚಿತವಾಗಿ ಅರ್ಥ ಮಾಡಿಕೊಳ್ಳಲು ಭಾಷೆ ಸಹಾಯ ಮಾಡುತ್ತದೆ.

''ಜಗತ್ತಿನಲ್ಲಿ ಸಮಾಜವಿಲ್ಲದೆ ಭಾಷೆಯಿಲ್ಲ. ಅದೇ ರೀತಿ ಭಾಷೆಯಿಲ್ಲದೆ ಸಮಾಜವಿಲ್ಲ. ಸಮಾಜ ಅಭಿವೃದ್ಧಿಗೊಂಡಂತೆ ಭಾಷೆಯು ಬೆಳೆಯುತ್ತಾ ಹೋಗುತ್ತದೆ. ಹೀಗಾಗಿ ಸಮಾಜ ಸಂಸ್ಕೃತಿ ಇವೆಲ್ಲಾ ಆಂತರಿಕ ಅವಿಭಾಜ್ಯ ಅಂಗಗಳು. ಪೀಟರ್ ಟ್ರೇಡ್ಗಿಲ್ ಹೇಳುವಂತೆ ''ಯಾವುದೇ ಭಾಷೆಯನ್ನು ಸಮಾಜದ ಹಿನ್ನೆಲೆಯಲ್ಲಿ ಗಮನಿಸದೇ ಅಧ್ಯಯನ ಮಾಡಿದರೆ ಭಾಷೆಯ ಸಂಪೂರ್ಣ ವೈಜ್ಞಾನಿಕ ವಿಶ್ಲೇಷಣೆ ಮಾಡಿದಂತೆ ಆಗುವುದಿಲ್ಲ''

ಈ ವ್ಯಾಖ್ಯಾನ ಸಮಾಜ ಮತ್ತು ಭಾಷೆಯ ನಡುವೆ ಇರುವ ಗಾಢ ಸಂಬಂಧವನ್ನು ಸೂಚಿಸುತ್ತದೆ. ಒಂದು ಸಮಾಜದ ವರ್ಗ, ಸ್ಥಾನ, ಪ್ರಾದೇಶಿಕತೆಯ ಹುಟ್ಟು, ಲಿಂಗ, ವಯಸ್ಸು, ಇವುಗಳ ಸೂಚಿಯಾಗುತ್ತದೆ

ಭಾಷೆ. ಭಾಷೆಯ ಮೂಲಕ ಪ್ರಾದೇಶಿಕತೆಯನ್ನು ಸೂಚಿಸಬಹುದು ಮತ್ತು ವಯಸ್ಸು, ಲಿಂಗಬೇಧವನ್ನು ಕಂಡು ಹಿಡಿಯಬಹುದು. ಭಾಷೆ ಸಾಮಾಜಿಕ ಅಭಿರಚನೆಯನ್ನು ಮತ್ತು ಸಾಮಾಜಿಕ ಬೇಧಗಳನ್ನು ಮಾತ್ರವೇ ಸೂಚಿಸುತ್ತದೆ. ಅಲ್ಲದೆ ಈ ಬೇಧ, ವ್ಯತ್ಯಾಸಗಳನ್ನು ಹುಟ್ಟು ಹಾಕುತ್ತದೆ. ಭಾಷೆ ಆಲೋಚನೆಗೆ ತಕ್ಕಂತೆ ರೂಪುಗೊಳ್ಳುವುದು. ಭಾಷೆಯ ಸ್ಥಾನಮಾನಗಳನ್ನು ಆಧಾರಿಸಿ ನೆಡೆಸುವ ಅಧ್ಯಯನ ಸಾಮಾಜಿಕ ಭಾಷಾ ವಿಜ್ಞಾನ ಮೊದಲ ಆಯಾಮ.

ಸಾಮಾಜಿಕ ಭಾಷಾ ವಿಜ್ಞಾನವು ಅನೇಕ ಭಾಷಾ ಬೇಧಗಳನ್ನು ಗುರುತಿಸುತ್ತಾ ಇದೆ. ಎರಡು ಭಿನ್ನ ಸಾಮಾಜಿಕ ವರ್ಗಗಳ ನಡುವೆ ವೃತ್ತಿಗಳಲ್ಲಿ ಒಂದು ನಿರ್ದಿಷ್ಟ ಸಮುದಾಯಗಳಾದ ಲಿಂಗಗಳಲ್ಲಿ ವಯಸ್ಸಿನಲ್ಲಿ ಶಿಕ್ಷಣದ ಮೂಲಕ ಆರ್ಥಿಕ ಸ್ಥಿತಿಗತಿ, ನಗರೀಕರಣ, ಬೇರೆ ಸಮಾಜದ ಘಟಕಗಳಾದ ಇವುಗಳಲ್ಲಿ ಭಾಷೆ ವ್ಯತ್ಯಾಸವಾಗುವುದನ್ನು ನೋಡಬಹುದು. ಹೀಗೆ ವ್ಯಕ್ತಿ ಭಾಷೆಯನ್ನು ಅಧ್ಯಯನ ಮಾಡುವ ಮೂಲಕ ಇಡೀ ಸಮುದಾಯವನ್ನು ಅಧ್ಯಯನ ಮಾಡಬಹುದು. ಮನುಷ್ಯ ಸಂಘಜೀವಿ ಸಮಾಜದಿಂದ ದೂರವಿರಲು ಸಾಧ್ಯವಿಲ್ಲ. ಅದೇ ರೀತಿ ಭಾಷೆಯನ್ನು ಬಿಟ್ಟು ಮನುಷ್ಯ ಇರಲು ಸಾಧ್ಯವಿಲ್ಲ. ಸಾಮಾಜಿಕ ಅಧ್ಯಯನದೊಂದಿಗೆ ಭಾಷಾ ಅಧ್ಯಯನ ಮಾಡಬೇಕಾಗುತ್ತದೆ. ಇದೊಂದು ಅನ್ವಯಿಕ ಶಿಸ್ತಾಗಿದೆ.

ಭಾಷಾ ಪ್ರಭೇದಗಳನ್ನು ಸಾಮಾನ್ಯವಾಗಿ ವ್ಯಕ್ತಿಭಾಷೆ, ಪ್ರಭೇದ ಭಾಷೆ ಮತ್ತು ಉಪಭಾಷೆ ಅಥವಾ ಪ್ರಾದೇಶಿಕ ಭಾಷೆಗಳೆಂದು ಪರಿಗಣಿಸುತ್ತಾರೆ. ವ್ಯಕ್ತಿ–ವ್ಯಕ್ತಿಗಳ ನಡುವಿನ ಭಾಷೆಯ ಬಳಕೆ ಧ್ವನಿ ಉಚ್ಚಾರಗಳಲ್ಲಿ ಕಾಣುವ ವ್ಯತ್ಯಾಸಗಳು ವ್ಯಕ್ತಿ ಭಾಷೆಯಾದರೆ ಹಲವು ಸಾಮಾಜಿಕ ಪಂಗಡಗಳಲ್ಲಿ ಉಂಟಾಗುವ ವ್ಯತ್ಯಾಸಗಳು ಪ್ರಭೇದ ಭಾಷೆ ಎನ್ನಿಸಿಕೊಳ್ಳುತ್ತವೆ. ಪ್ರದೇಶ–ಪ್ರದೇಶಗಳ ನಡುವೆ ಗುರುತಿಸುವಷ್ಟು ಪ್ರಮಾಣದ ವ್ಯತ್ಯಾಸಗಳಾಗಿ ಉಪಭಾಷೆ ಅಥವಾ ಪ್ರಾದೇಶಿಕ ಭಾಷೆಗಳೆಂದು ಕರೆಯಿಸಿಕೊಳ್ಳುತ್ತವೆ. ಈ ವ್ಯತ್ಯಾಸಗಳು ಪ್ರಾದೇಶಿಕ ಸಾಮಾಜಿಕ ಸಾಂಸ್ಕೃತಿಕ ಸ್ತರಗಳನ್ನು ಅವಲಂಬಿಸಿರುತ್ತವೆ.

ಕುವೆಂಪುರವರ ಕಾದಂಬರಿಗಳು ಮಲೆನಾಡಿನ ಪರಿಸರದಲ್ಲಿ ಜೀವ ತಳೆದವು. ಅವುಗಳಲ್ಲಿ ನಾವು ಅನೇಕ ಅನ್ಯಭಾಷೆಯ ಹಾಗೂ ಸ್ವಭಾಷೆಯ ಶಬ್ದಗಳು ಗ್ರಾಮೀಣರ ಮಾತಿನಲ್ಲಿ ಮತ್ತೊಂದು ರೂಪವನ್ನು ಪಡೆದು ಕಾದಂಬರಿಯುದ್ದಕ್ಕೂ ಹೇರಳವಾಗಿ ಬಳಕೆಗೊಂಡಿದೆ. ಉದಾ :– ದಗಲಬಾಜಿ (ಮೋಸ), ತಾಕೀತು (ಆಜ್ಞೆ), ತಲಾಸು (ಪತ್ರೆ), ಇಲಾಜು (ಚಿಕಿತ್ಸೆ), ಪಸಂದು, ಲೋಟೀಸು <ನೋಟೀಸು, ಮಜ್ಜಾನ< ಮಧ್ಯಾಹ್ನ, ಬಿರಾಂತ್<ಭ್ರಾಂತು, ಇಚಾರ< ವಿಚಾರ ಮುಂತಾದ ಕನ್ನಡದಲ್ಲಿ ರೂಪಾಂತರ ಹೊಂದಿವೆ.

ಇ) ಗಾದೆ ಮಾತುಗಳ ವೈಶಿಷ್ಟ್ಯ : ಜನಸಾಮಾನ್ಯರು ತಮ್ಮ ಪ್ರತಿನಿತ್ಯದ ಮಾತುಕತೆ ಸಮಯ ಸಂದರ್ಭಾನುಸಾರವಾಗಿ ವಿಷಯ ಖಚಿತತೆಗಾಗಿ ಬಳಸಿರುವ ಗಾದೆಗಳು ಭಾಷೆಗೆ ಮೊನಚನ್ನು ಮೂಡಿಸಿವೆ. ಕಿರಿದರಲ್ಲಿ ಹಿರಿದಾದ ಅರ್ಥವನ್ನು ಹೇಳುವಂತಹ ಶಕ್ತಿಯು ಗಾದೆ ಮಾತುಗಳಾಗಿದೆ.

ಜನರ ಜೀವನಾನುಭವಗಳು ಮಥನಗೊಂಡು ಸೂಕ್ತ ಸಂದರ್ಭದಲ್ಲಿ ಗಾದೆಗಳು ರಚನೆಗೊಳ್ಳುತ್ತವೆ. ಪ್ರತಿಯೊಂದು ಗಾದೆಯಲ್ಲೂ ಲೋಕಾನುಭವ ಮತ್ತು ಲೋಕನೀತಿಗಳ ವಿಚಾರಗಳಿರುತ್ತವೆ.

ಆಡುಮಾತಿನ ಕೆನೆಯಂತಿರುವ ಗಾದೆಗಳು ಪ್ರಾದೇಶಿಕ ಕಾದಂಬರಿಗಳಲ್ಲಿ ಹೇರಳವಾಗಿ ದೊರಕುತ್ತವೆ. ಅವುಗಳ ಬಳಕೆಯಲ್ಲೂ ಪ್ರಾದೇಶಿಕ ವಾತಾವರಣ, ಧ್ವನಿ, ವೈಶಿಷ್ಟ್ಯತೆ, ಉಪಮೆ, ಪ್ರತಿಮೆಗಳು, ನಗರ ಜೀವನದಿಂದ ಗ್ರಾಮಜೀವನ ಎಷ್ಟು ಭಿನ್ನ ಹಾಗೂ ದೂರವಾದದ್ದು ಎಂಬುದನ್ನು ರುಜುವಾತುಪಡಿಸುತ್ತವೆ. ಕೆಲವು ಉದಾ :-

1) ಸಲಿಗೆ ಕೊಟ್ಟ ನಾಯಿ ಸೊಟ್ಟಗ ನೆಕ್ಕಿತಂತೆ
2) ಅವಳು ಹೇತು ಬಂದಲ್ಲಿ ನಿನಗೆ ಕೂತು ಬರೋ ಯೋಗ್ಯತೆಯಿಲ್ಲ
3) ಉರಿಯೋ ಬೆಂಕಿಗೂ ಹರಿಯೋ ನೀರಿಗೂ ಶಾಸ್ತ್ರ ಇಲ್ಲ
4) ಕೋಳಿ ಕೇಳಿ ಕಾರ ಕಡಿತಾರ?
5) ಬೇಲಿಗೆ ಓತಿಕ್ಯಾತ ಸಾಕ್ಷಿ
6) ಹಸಿಗಾಯದ ಮೇಲೆ ಬಿಸಿನೀರು ಹೊಯ್ದ
7) ಅಂಬಲಿ ತಿನ್ನುವ ಅಂಬರಕ್ಕೆ ಹಾರಿದ (ಮ.ಮ.)
8) ಆರಿದ್ರ ಮಳೆಗೆ ಆದವನೆ ಗಂಡ (ಮ.ಮ. 571)
9) ಉಳ್ಳೆ ತಿಂದವನಿಗೆ ಉಳುಕಿತು (ಮ.ಮ. 78)
10) ಊರಿಗೆ ಬರೋಳು, ಕೇರಿಗೆ ಬರೋದಿಲ್ಲವೆ (ಕಾ.ಹೆ.66)
11) ಕೊಟ್ಟವನು ಕೋಡಿಂಗ ತೆಗೆದುಕೊಂಡವ ವೀರಭದ್ರ (ಕಾ.ಹೆ.422)

ಪ್ರಾದೇಶಿಕ ಕಾದಂಬರಿಗಳಲ್ಲಿ ಹಾಸು ಹೊಕ್ಕಾಗಿರುವ ಈ ಬಗೆಯ ಗಾದೆಗಳು ಒಂದೇ ಪ್ರದೇಶಕ್ಕೆ ಸೀಮಿತವಿಲ್ಲದಿದ್ದರೂ ಅವುಗಳಲ್ಲಿ ಶಾಬ್ದಿಕ, ಧ್ವನ್ಯಾತ್ಮಕ, ಭಾವನಾತ್ಮಕ ವ್ಯತ್ಯಾಸಗಳನ್ನು ಕಾಣುತ್ತೇವೆ. ಗಾದೆಗಳು ಸಾಮಾನ್ಯವಾಗಿ ಹೇಳುವವರ ಸ್ವಭಾವ, ಬೆಳೆದ ಪರಿಸರ ಸಂಸ್ಕಾರಗಳಿಂದ ಬೇರೆ ಬೇರೆ ರೂಪಗಳನ್ನು ಪಡೆಯುತ್ತವೆ. ಕಾದಂಬರಿಗಳಲ್ಲಿ ಸಮಯ ಸನ್ನಿವೇಶ, ಸಂದರ್ಭಗಳಿಗನುಗುಣವಾಗಿ ಬಳಕೆಯಾಗಿರುವ ಗಾದೆಗಳು ಗ್ರಾಮಜೀವನ ವಾತಾವರಣವನ್ನು ಮೂಡಿಸುತ್ತವೆ ಮಾತ್ರವಲ್ಲ ಮಾತಿನ ಖಚಿತತೆಗೆ ಶಕ್ತಿ ನೀಡುತ್ತವೆ. ಭಾಷೆಯ ಬನಿಯುಳ್ಳ ಆಡುಮಾತು ಗಾದೆಗಳು ಚಲಾವಣೆಯ ನಾಣ್ಯಗಳಾಗಿ, ರೂಢಿಗ್ರಸ್ಥ ಭಾಷೆಯಿಂದ ಮುಕ್ತವಾದ ಭಾಷೆಯ ಚೆಲುವನ್ನು ಸೃಷ್ಟಿಸಿವೆ.

### ಈ) ಪ್ರಾದೇಶಿಕ ನಾಮ ಪದಗಳು :

ಭಾಷಾ ವಿಜ್ಞಾನದಲ್ಲಿ 'ನಾಮ'ಗಳ ಕುರಿತಾದ ಅಧ್ಯಯನಕ್ಕೆ ಹೆಚ್ಚಿನ ಮಹತ್ವವಿದೆ. ನಾಮಗಳಿಗೆ ಸಾವಿರಾರು ವರ್ಷಗಳಷ್ಟು ಪ್ರಾಚೀನ ಇತಿಹಾಸವಿದ್ದರೂ, ಅವುಗಳ ವೈಜ್ಞಾನಿಕ ವಿಶ್ಲೇಷಣೆ ತೀರ ಈಚೆಗೆ ನಡೆದು ಅದೊಂದು ಪ್ರತ್ಯೇಕ ಅಧ್ಯಯನ ಶಾಖೆಯಾಗಿ ಬೆಳೆದಿದೆ. ಈ ನಾಮ ವಿಜ್ಞಾನದಲ್ಲಿ ವ್ಯಕ್ತಿ, ಪ್ರಾಣಿ, ಗ್ರಾಮ, ಊರು, ಕೇರಿ, ಜನಾಂಗ, ಉದ್ಯೋಗ, ಸ್ಥಳನಾಮ ಮೊದಲಾದವುಗಳು ಸಮಾವೇಶಗೊಳ್ಳುತ್ತವೆ.

ನಾಮಗಳ ಪದ ನಿಷ್ಪತ್ತಿ, ಅರ್ಥಸ್ವರೂಪ ಹಾಗೂ ವೈಶಿಷ್ಟ್ಯಗಳು ಪ್ರಾದೇಶಿಕ ಜನಾಂಗ ಮತ್ತು ಸಂಸ್ಕೃತಿಗಳ ಹಿನ್ನೆಲೆಯಲ್ಲಿ ಮಹತ್ವಪೂರ್ಣವಾಗಿವೆ. ಹೀಗೆ ಒಂದು ಭಾಷೆಯ ಅಧಿಕ ಪ್ರಮಾಣ ಪದಗಳಾದ ನಾಮ ಪದಗಳು ವೈವಿಧ್ಯ, ವೈಶಿಷ್ಟ್ಯತೆ ಬದಲಾವಣೆಗಳನ್ನು ಕಾಣುವುದಾಗಿದೆ.

ಸೃಜನಶೀಲ ಬರಹಗಳಲ್ಲಿನ ನಾಮ ವಿಚಾರಗಳ ವಿಶ್ಲೇಷಣೆ ಸಾಂಸ್ಕೃತಿಕ ಸ್ತರದ ವಿಶ್ಲೇಷಣೆಯೂ ಆಗಿದೆ. ಆದ್ದರಿಂದ ಪ್ರಾದೇಶಿಕ ಕಾದಂಬರಿಗಳಲ್ಲಿ ಆಕಾರ ಪಡೆದಿರುವ ಇಂಥ ನಾಮಪದಗಳನ್ನು ಇಲ್ಲಿ ಸ್ಥೂಲವಾಗಿ ವಿವೇಚಿಸಲಾಗಿದೆ.

1) ವ್ಯಕ್ತಿನಾಮ :

ಹೆಸರಿನಲ್ಲೇನಿದೆ ಮಣ್ಣು ಎಂದು ಕೆಲವರು ಮೂಗು ಮುರಿಯುವುದುಂಟು. ಆದರೆ ಹೆಸರೇ ಮುಖ್ಯ. ಹೆಸರಿನಲ್ಲೇ ಎಲ್ಲಾ ಇರುವುದು ಎನ್ನುವವರಿಗೇನೂ ಕೊರತೆಯಿಲ್ಲ ಏನೇ ಆದರೂ ಪ್ರತಿಯೊಬ್ಬ ವ್ಯಕ್ತಿಯನ್ನು ಗುರುತಿಸಲು ಹೆಸರು ಮುಖ್ಯ. ಒಂದು ನಿರ್ದಿಷ್ಟ ಹೆಸರನ್ನ ಅಂಕಿತಗೊಳಿಸಿಕೊಳ್ಳುತ್ತಾರೆ. ಆ ಹೆಸರು ಸಾಮಾಜಿಕ ಹಾಗೂ ಪ್ರಾದೇಶಿಕವಾಗಿ ಭಿನ್ನವಾಗಿರುತ್ತವೆ. ದೇವರು, ಜಾತಿ, ಕಸುಬು, ಗ್ರಾಮನಾಮಗಳು ಸೇರಿರುತ್ತವೆ. ಆ ಹೆಸರುಗಳಿಂದ ಸಾಮಾಜಿಕ ಜನಾಂಗಿಕ ಹಾಗೂ ಕೌಟುಂಬಿಕ ಸಂಸ್ಕೃತಿಯ ರೇಖೆಗಳನ್ನು ಗುರುತಿಸಬಹುದು. ಆ ಹೆಸರುಗಳಲ್ಲಿ ಜಾತಿ, ಅಧಿಕಾರ, ಅವರ ಸ್ವಭಾವ, ಗುಣಗಳನ್ನ ತಿಳಿಯಬಹುದಾಗಿದೆ. ಉದಾ :– ಚಂದ್ರಯ್ಯಗೌಡ, ಸುಬ್ಬಮ್ಮಹೆಗ್ಗಡಿತಿ, ನಾಯಿಗುತ್ತಿ, ಹಳೇ ಪೈಕದ ತಿಮ್ಮ

2) ಬ್ರಾಹ್ಮಣ ನಾಮ :

ಸಾಮಾನ್ಯವಾಗಿ ಎಲ್ಲಾ ಪ್ರದೇಶಗಳಲ್ಲಿಯೂ ಬ್ರಾಹ್ಮಣರ ಹೆಸರುಗಳಲ್ಲಿ ಶಿಷ್ಟತೆಯ ಪ್ರಭಾವವನ್ನು ಕಾಣುತ್ತೇವೆ. ಗಂಡಸರ ಹೆಸರುಗಳ ಉತ್ತರಾರ್ಧದಲ್ಲಿ ಆಚಾರ್ಯ, ರಾಯರು, ರಾವ್, ಮೂರ್ತಿ ಎಂದೂ ಹೆಂಗಸರ ಹೆಸರುಗಳ ಮುಂದೆ 'ಬಾಯಿ' ಎಂದು ಬರುತ್ತವೆ.
ಉದಾ :– ವೆಂಕಪ್ಪ ಜೋಯಿಸ

3) ಇತರ ವ್ಯಕ್ತಿಗಳು :

ಬ್ರಾಹ್ಮಣೇತರ ಹೆಸರುಗಳಲ್ಲಿ ಸಾಮಾನ್ಯವಾಗಿ ಒಕ್ಕಲಿಗರಲ್ಲಿ ಗೌಡ, ಲಿಂಗಾಯಿತರಲ್ಲಿ ಅಪ್ಪ, ಮುಸ್ಲಿಂರಲ್ಲಿಸಾಬ್‌ಗಳೆಂದು ಹೆಸರಿನ ಕೊನೆಯಲ್ಲಿ ಸೇರಿಕೊಳ್ಳುತ್ತವೆ. ಮಲೆನಾಡಿನ ಹೆಸರುಗಳಲ್ಲಿ ಶೆಟ್ಟರ ನಾಮಗಳಲ್ಲಿ ಐಗಳು, ಅಂತಕ್ಕ, ಕಾವೇರಿ, ಕೃಷ್ಣಯ್ಯಶೆಟ್ಟಿ, ಹಳೇಪೈಕದವರಲ್ಲಿ_ ಕಾಡಿ, ತಿಮ್ಮ ಪುಟ್ಟಿ, ಸೇಸನಾಯ್ಕ, ಬಿಲ್ಲವನ ಹೆಸರುಗಳಲ್ಲಿ ಚೀಂಕ್ರ, ಹೊಲೆಯರಲ್ಲಿ ಕೆಂಚ, ಗಂಗ, ಭೈರ, ಗುತ್ತಿ ಇತರ ಜಾತಿಗಳಲ್ಲಿ ಇಜಾರುಸಾಬಿ, ಜೀವರತ್ನಯ್ಯ, ವ್ಯಕ್ತಿನಾಮಗಳಲ್ಲಿ ಕೆಲವು ವಿಶಿಷ್ಟ ಅಂಶಗಳಿರುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ಜಾತಿ, ಮತ, ಅಂತಸ್ತು ಒಂದೇ ಮೂಲದ ಹೆಸರುಗಳಲ್ಲಿ ಲಿಂಗ, ಜಾತಿಬೇಧಗಳು, ಲಿಂಗವಾಚಕಗಳಾಗಿ ಇಡುವ ಪದ್ಧತಿ ವಂಶಪರಾಂಪರ್ಯವಾಗಿ ಬಂದಿದೆ.

4) ಅಡ್ಡ ಹೆಸರುಗಳು : (ಸರ್‌ನೇಮ್)

ಅಡ್ಡ ಹೆಸರುಗಳು ಸಾಮಾನ್ಯವಾಗಿ ಪೂರ್ವಿಕವಾಗಿ ಬಂದ ಜಾತಿ ಮನೆತನ, ಊರು, ಉದ್ಯೋಗ, ಪ್ರದೇಶಗಳನ್ನು ಅವಲಂಬಿಸಿ ಬಂದಿರುತ್ತದೆ. ಉದಾ :– ಕುವೆಂಪು ಅವರ ಕಾನೂರು ಹೆಗ್ಗಡಿತಿ ಹಾಗೂ ಮಲೆಗಳಲ್ಲಿ ಮದುಮಗಳು ಬರುವ ಒಕ್ಕಲಿಗರಲ್ಲಿ 'ಗೌಡ' ಪರಂಪರೆಯಾಗಿ ಬಂದಿರುವುದನ್ನು ಕಾಣಬಹುದು. ಅದೇ ರೀತಿ ಹೆಗ್ಗಡೆ, ಸೇರೆಗಾರ, ಸೆಟ್ಟಿ ಮುಂತಾದವು.

5) ನಾಮ ವಿಶೇಷಣ :

ನಾಮ ವಿಶೇಷಣಗಳಲ್ಲಿ ವ್ಯಕ್ತಿಯ ಗುಣ, ಸ್ವಭಾವ, ಸ್ಥಾನಮಾನ ವರ್ತನೆ, ಆಕಾರ, ಸಂಕ್ಷೇಪಿಕರಣ ಎಲ್ಲವೂ ಒಳಗೊಂಡಿರುತ್ತದೆ. ಹಲವು ಸಲ ನಿಜನಾಮವೊಂದು ಬೇರೆಯಿದ್ದರೆ, ಅಂಕಿತವಾಗಿ ಬಂದ ನಾಮ ಬೇರೆಯಾಗಿರುತ್ತದೆ. ಮೂಲ ನಾಮ ಹಿಂದೆ ಸರಿದು ಅಂಕಿತನಾಮಗಳೇ ಪ್ರಚಾರಕ್ಕೆ ಬರುತ್ತವೆ.

ಉದಾ :– ಮಲೆಗಳಲ್ಲಿ ಮದುಮಗಳುವಿನಲ್ಲಿ ಬರುವ ಹೊಲೆಯರ ಗುತ್ತಿಗೆ ವಿಶೇಷವಾಗಿ ಬಂದ ಹೆಸರು 'ನಾಯಿಗುತ್ತಿ' ಹೊಲೆಯರ ಗುತ್ತಿಯ ಜೊತೆಯಲ್ಲಿ ಅವನು ಸಾಕಿದ ನಾಯಿ ಯಾವಾಗಲೂ ಇರುವುದರಿಂದ ಅವನಿಗೆ ಅದೇ ಹೆಸರು ರೂಢಿಯಾಗಿ ಬಂದಿದೆ. ಗುತ್ತಿಯನ್ನು ಗುರುತಿಸಬೇಕಾದರೆ ನಾಯಿಯಿಂದಲೇ ಎನ್ನುವಷ್ಟರ ಮಟ್ಟಿಗೆ ಸಂಬಂಧ ಸ್ಥಾಪಿತವಾಗಿದೆ. ಹಾಗೆಯೇ ಬೆಟ್ಟಳ್ಳಿ ಲಕ್ಷ್ಮಿಯನ್ನು 'ಹೊಟ್ಟೆಲಕ್ಷ್ಮಿ' ಎಂದು ಕರೆಯುತ್ತಿದ್ದರು. ಇದು ಅವಳ ಊಟದ ಹಪಾಹಪಿತನವನ್ನು ಸೂಚಿಸುತ್ತದೆ.

6) ಗ್ರಾಮ ನಾಮಗಳು :

ಗ್ರಾಮನಾಮಗಳ ಅಧ್ಯಯನವೆಂದರೆ ಒಂದರ್ಥದಲ್ಲಿ ಭಾಷೆಯೇ ಅಧ್ಯಯನವೇ ಆಗಿದೆ. ಭಾಷಾ ವಿಜ್ಞಾನದ ದೃಷ್ಟಿಯಿಂದ ಸ್ಥಳ ನಾಮಗಳ ಸಂಶೋಧನೆಗೆ ಎತ್ತರವಾದ ಸ್ಥಾನವಿದೆ. ಮಾನವನ ಕಲ್ಪನಾಶಕ್ತಿಗೆ ಅವಕಾಶ, ಚೋಧನೆಯನ್ನು ಒದಗಿಸಿ ತಮ್ಮ ಸುತ್ತ ಕಟ್ಟುಕಥೆಗಳ ಹುತ್ತ ಬೆಳೆಯುವಂತೆ ಮಾಡಿದೆ. ಗ್ರಾಮನಾಮಗಳು ಭೌಗೋಳಿಕ ವೈಲಕ್ಷಣ್ಯಗಳನ್ನು ಸೂಚಿಸುವಂತಹವು ಎಂಬ ಸಾಮಾನ್ಯ ಅರ್ಥದಲ್ಲೂ ಮತ್ತು ಸಾಂಸ್ಕೃತಿಕ ವೈಶಿಷ್ಟ್ಯವನ್ನು ಸೂಚಿಸುವಂತಹವು ಎಂಬ ವಿಶೇಷ ಅರ್ಥವೂ ಇದೆ.

ಕಾದಂಬರಿಯ ಕಥೆ ನಡೆಯುವ ಸ್ಥಳಕ್ಕೆ ಪ್ರದೇಶ ಇಲ್ಲವೆ ಆವರಣವೆಂದು ಕರೆಯುತ್ತೇವೆ. ಪ್ರಾದೇಶಿಕ ಕಾದಂಬರಿಗಳು ಯಾವುದಾದರೊಂದು ಊರು, ಪ್ರದೇಶಗಳ ಹಿನ್ನೆಲೆ ಹೊಂದಿರುತ್ತದೆ. ಅಂಥ ಸಮಯದಲ್ಲಿ ಲೇಖಕನು ಆ ಪ್ರದೇಶದ ಊರು, ಕೇರಿ,ಪ್ರದೇಶ, ಕಾಡು, ಬೆಟ್ಟ, ನದಿ, ಹಳ್ಳ, ಕೊಳ್ಳಗಳನ್ನು ಕಾದಂಬರಿಯಲ್ಲಿ ದಾಖಲಿಸುತ್ತಾರೆ. ಹೀಗೆ ಪ್ರಾದೇಶಿಕ ಕಾದಂಬರಿಗಳಲ್ಲಿ ದಾಖಲಾಗಿರುವ ಆಯಾ ಪ್ರದೇಶಗಳ ವೈಶಿಷ್ಟ್ಯಗಳನ್ನು ಇಲ್ಲಿ ಗಮನಿಸಬಹುದು.

ಮಲೆನಾಡಿನ ವನಸಿರಿ ಬೆಟ್ಟಗಳ ದುರ್ಗಮಗಳ ನಡುವೆ ತಲೆಎತ್ತಿ ನಿಂತಿರುವ ಊರುಗಳನ್ನು ಕುವೆಂಪುರವರ ಕಾದಂಬರಿಗಳಲ್ಲಿ ಕಾಣುತ್ತೇವೆ. ಕಾನೂರು ಹೆಗ್ಗಡಿತಿಯಲ್ಲಿ ಕಾನೂರು, ಮುತ್ತಳ್ಳಿ,

ಮಂಡಗದ್ದೆ, ಸಿದ್ದರ ಮಠ, ಕುರುವಳ್ಳಿ, ಆಗುಂಬೆ, ಸೀತೆಮನೆ, ಹುಂಜದ ಕಟ್ಟೆ, ಕೊಪ್ಪ, ತೀರ್ಥಹಳ್ಳಿ ನುಗ್ಗೆಮನೆ, ಕೆಳಕಾನೂರು, ನೆಲ್ಲುಹಳ್ಳಿ ಮೊದಲಾದವುಗಳು 'ಮಲೆಗಳಲ್ಲಿ ಮದುಮಗಳು' ನಲ್ಲಿ ಆಗುಂಬೆ, ಕಲ್ಲೂರು, ಕಾಗಿನಹಳ್ಳಿ, ತೀರ್ಥಹಳ್ಳಿ, ದೇವಂಗಿ, ಮತ್ತಿಗೇರಿ, ಸಿಂಬಾವಿ ಹಳೆಮನೆ, ಹೂವಳ್ಳಿ, ಹೊನ್ನಳ್ಳಿ, ಕೋಣೂರು, ಬಾವಿಕೊಪ್ಪ, ಸೀತೆಮನೆ, ಕಲ್ಲೂರು ಮುಂತಾದವು.

ಒಟ್ಟಿನಲ್ಲಿ ಪ್ರಾದೇಶಿಕ ಕಾದಂಬರಿಗಳಲ್ಲಿ ಬರುವ ಗ್ರಾಮ ನಾಮಗಳು ವಿಭಿನ್ನ ಪ್ರಾಕೃತಿಕ, ಐತಿಹಾಸಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ಪಡೆದವುಗಳಾಗಿವೆ. ಮಲೆನಾಡಿನ ಊರುಗಳ ಹೆಸರು ಮತ್ತೊಂದು ಪ್ರದೇಶಗಳಲ್ಲಿ ಕಾಣುವುದು ವಿರಳ. ಕಾದಂಬರಿಗಳಲ್ಲಿ ಬಂದಿರುವ ಸನ್ನಿವೇಶ ವಹಿಸಿರುವ ಪಾತ್ರಗಳನ್ನು ಗಮನಿಸಿದರೆ ಅಲ್ಲಿಯ ವೈಶಿಷ್ಟ್ಯತೆಯನ್ನು ಕಾಣಬಹುದು. ಹೀಗೆ ಭಾಷಿಕವಾಗಿ ಅವುಗಳ ಅಧ್ಯಯನದಿಂದ ಪ್ರಾದೇಶಿಕ ಭಾಷಾ ಪರಿಸರ ಹಾಗೂ ಸಾಂಸ್ಕೃತಿಕ ಪರಿಸರಗಳ ಅನೇಕ ಸಂಗತಿಗಳು ತಿಳಿಯುತ್ತದೆ.

ಈ ಕಾದಂಬರಿಗಳೆರಡರಲ್ಲೂ ಬಳಕೆಗೊಂಡಿರುವ ಕೆಲವು ವಿಶಿಷ್ಟ ಪ್ರಾದೇಶಿಕ ನುಡಿಗಳನ್ನು ಗಮನಿಸಬಹುದು. ಉದಾ :– ದರೋಬಸ್ತು ದನಗೋಳು, ಹಡಬೆ, ಸೀರುಡಿಕೆ, ಹಂಡಹಕ್ಕಿ, ಕನಾತಿ, ಬೆಣಕು ಇತ್ಯಾದಿ. ಹಾಗೆಯೇ ಹಲವಾರು ಜನಪದ ನುಡಿಗಟ್ಟುಗಳೂ ಸಹ ಬಳಕೆಗೊಂಡಿವೆ.

1) ಹುಯ್ದಕ್ಕಿ ಬೇಯಲ್ಲ (ಪರಸ್ಪರ ಆಗಲ್ಲ)
2) ಎಲೆಗೆ ಸುಣ್ಣ ಹಚ್ಚೋ ಒಳಗಾಗಿ (ಕ್ಷಣಾರ್ಧದಲ್ಲಿ)
3) ಬಾಯಿಗೆ ಕೊಡು (ತಾಂಬೂಲ ಕೊಡು)
4) ಮೈಮೇಲೆ ಕೈಯಾಡಿಸು (ಹೊಡಿ)
5) ಮೂಗುದಾರ ಹಾಕು (ನಿಯಂತ್ರಿಸು) ಇತ್ಯಾದಿ.

ಕಾದಂಬರಿಗಳಲ್ಲಿ ಪ್ರಾಸಬದ್ಧವಾದ ಭಾಷೆ ಸಹಜವಾಗಿ ಅರ್ಥಾನುಸಾರವಾಗಿ ಬಂದಿರುವುದಕ್ಕೆ ಉದಾಹರಣೆ :
1) ತಮ್ಮಂಥ ಒಡೇರು ಕೊಟ್ಟರೆ ನಮ್ಮಂಥ ಬಡೋರಿಗೆ ಉಂಟು
2) ಜಡನೂ ಇಲ್ಲಿ ಗಿಡನೂ ಇಲ್ಲಿ
3) ಮಲಗಿದ್ರೆ ಮಲಗಬೇಕು ಹಿಂಗೆ, ಒಣಕೆ ತುಂಡು ಬಿದ್ಹಾಂಗೆ

ಈ ಕಾದಂಬರಿಗಳು ಗ್ರಾಮೀಣ ಜೀವನವನ್ನು ಚಿತ್ರಿಸುವ ಕಾದಂಬರಿಗಳು ವಿಷಯ ಯಾವುದೇ ಆಗಿರಲಿ ಅದು ಸಾಹಿತ್ಯಕ್ಕೆ ಮುಖ್ಯವಲ್ಲ. ಅದನ್ನು ರೂಢಿಸುವ ನಿರೂಪಣಾಶೈಲಿ ಬಹುಮುಖ್ಯ. ಕುವೆಂಪು ಅವರ ಕಾದಂಬರಿಗಳ ಗಾಂಭೀರ್ಯ, ಶಬ್ದಸಂಪತ್ತು, ಅರ್ಥಪೂರ್ಣತೆ, ರಸಭಾವಗಳ ಆವಿರ್ಭಾವ – ಈ ಒಂದೊಂದನ್ನೂ ವಿವರವಾಗಿ ತಿಳಿದು ಅನುಭವಿಸುವುದರಿಂದ ಆಗುವ ಆನಂದ ಅಷ್ಟಲ್ಲ. ಭಾಷೆಭಾವಗಳ ಸಮರಸ ಸಂಯೋಜನೆಯೇ ಶೈಲಿ, ಶಬ್ದ ಸಂಪತ್ತಿನ ಶಕ್ತಿಯುಳ್ಳ ಲೇಖಕ ತನ್ನ ಭಾವನೆಗಳನ್ನು ನಾನಾ ವಿಧವಾಗಿ ಭಾಷಾ ಹಂದರದಲ್ಲಿ ಹಬ್ಬಿಸಿ ಸಾಹಿತ್ಯಲೋಕವನ್ನೇ ವಿಸ್ಮಯಗೊಳಿಸುತ್ತಾನೆ ಎಂಬ ಮಾತು ಕುವೆಂಪು ಅವರ ಕಾದಂಬರಿಗಳ ವಿಷಯದಲ್ಲಿ ನಿಜವಾಗಿದೆ.

**********

# VII. ಕುವೆಂಪು ಕಾದಂಬರಿಗಳಲ್ಲಿ ಸಮಾಜ ಚಿತ್ರಣ

ಭಾರತದಂಥ ಹಿಂದುಳಿದ ಸಮಾಜಗಳಲ್ಲಿ ಅದೂ ಪ್ರತಿಷ್ಠಿತ ವರ್ಗದ ಸಾಹಿತ್ಯ–ಸಾಹಿತಿಗಳು ಬಹುಸಂಖ್ಯಾತ ವರ್ಗಗಳ ಜೀವನವನ್ನು ಕಡೆಗಣಿಸಿದಂಥ ಸಂದರ್ಭದಲ್ಲಿ, ಸಮಗ್ರ ದೃಷ್ಟಿಯ ಲೇಖಕರಾದ ಕುವೆಂಪು ಅವರ ಸಾಹಿತ್ಯ ಸೃಷ್ಟಿ ಬಹಳ ಮುಖ್ಯವಾಗುತ್ತದೆ. ಈ ಅಧ್ಯಾಯದಲ್ಲಿ ಕುವೆಂಪು ಕಾದಂಬರಿಗಳಿಂದ ದೊರೆಯುವ ಸಮಾಜ ಚಿತ್ರವನ್ನು ಬಿಡಿಸುವ ಉದ್ದೇಶವಿದೆ. ಪಾಶ್ಚಿಮಾತ್ಯ ಪ್ರಭಾವ, ಮಲೆನಾಡಿನ ಸಮಾಜ, ಅದು ಒಳಗಾದ ಸ್ಥಿತ್ಯಂತರಗಳು, ಮಹಿಳೆಯರು ಮತ್ತು ದಲಿತರ ಬವಣೆಗಳು ಮತ್ತು ಆಧುನಿಕತೆ ಹೇರಿದ ಒತ್ತಡಗಳು ಮುಂತಾದವುಗಳನ್ನು ಚರ್ಚಿಸಲಾಗಿದೆ.

ಕುವೆಂಪು ಅವರ ಕೊಡುಗೆ ಸಾಹಿತ್ಯದ ದೃಷ್ಟಿಯಿಂದ ಮಾತ್ರವಲ್ಲ, ಜನಜೀವನದ ದೃಷ್ಟಿಯಿಂದಲೂ ಅತ್ಯಂತ ಮಹತ್ವಪೂರ್ಣವಾದುದು. ಸಾಹಿತ್ಯಕ್ಕಿಂತ ಜೀವನ ದೊಡ್ಡದು ಮತ್ತು ಮುಖ್ಯವಾದುದು ಎಂಬುದು ಅವರ ಮೂಲಭೂತವಾದದ ನಿಲುವು ; ಎಂತಲೇ ಅವರ ಕೃತಿಗಳಲ್ಲಿ ವ್ಯಕ್ತವಾಗುವ ಜೀವನ ಪ್ರಜ್ಞೆ ಹಾಗೂ ಸಾಮಾಜಿಕ ಪ್ರಜ್ಞೆ ದಟ್ಟವಾದುದು; ಕಲೆಗಾಗಿ ಕಲೆ ಎಂಬ ಸಂಕುಚಿತ ನೆಲೆಯನ್ನು ಮೀರಿ, ಜೀವನಕ್ಕಾಗಿ ಕಲೆ ಎಂಬ ಉನ್ನತ ಭೂಮಿಕೆಯಲ್ಲಿ ಪರ್ಯವಸಾನಗೊಂಡದ್ದು.

''ನನ್ನ ಸಾಹಿತ್ಯವೆಲ್ಲ ಸಾಮಾಜಿಕ ಅಸ್ತ್ರವಾಗಿ ಉದ್ದಿಷ್ಟವಾಗಿದೆ'' ಎಂದು ಕುವೆಂಪು ಅವರೇ ಹೇಳಿಕೊಳ್ಳುತ್ತಾರೆ. ಇಂಥ ಮನೋಧರ್ಮದಿಂದ ಸೃಷ್ಟಿಯಾಗುವ ಸಾಹಿತ್ಯ ಸಮಷ್ಟಿ ಸ್ವರೂಪದ್ದಾಗುತ್ತದೆಯೇ ಹೊರತು ಕೇವಲ ವೈಯಕ್ತಿಕ ಅಥವಾ ಖಾಸಗಿ ಆಗುವುದಿಲ್ಲ. ಸಮಾಜದಲ್ಲಿ ಮನೆ ಮಾಡಿಕೊಂಡಿರುವ ಜಾತಿಬೇಧ, ವರ್ಗ ವೈಷಮ್ಯ, ಬಡತನ, ಸುಲಿಗೆ, ಶೋಷಣೆ, ಮೌಢ್ಯ, ಅನಾಚಾರಗಳನ್ನು ಕುವೆಂಪು ಜ್ವಲಂತವಾಗಿ ಅನಾವರಣಗೊಳಿಸುತ್ತಾರೆ ಮಾತ್ರವಲ್ಲದೆ ಅವುಗಳಿಂದ ಪಾರಾಗಿ ನಾವು ಸರ್ವೋದಯದತ್ತ ಮುನ್ನಡೆಯಬೇಕೆಂಬ ತೀವ್ರ ಕಳಕಳಿಯನ್ನು ವ್ಯಕ್ತಪಡಿಸುತ್ತಾರೆ.

ಸಾಮಾನ್ಯ ಜನತೆಯ ಮೌಢ್ಯವನ್ನು ಪ್ರೇರಿಸಿ ಇಲ್ಲವೆ ಪೋಷಿಸಿ ದೇವರು ಧರ್ಮಗಳ ಹೆಸರಿನಲ್ಲಿ ಅವರನ್ನು ಶೋಷಿಸುವ ಪುರೋಹಿತಶಾಹಿಯ ಬಗೆಗೆ ಕುವೆಂಪು ಅವರಿಗೆ ಸಾತ್ವಿಕ ಕ್ರೋಧವಿದೆ. ಅದು ಯಾವೊಬ್ಬ ವ್ಯಕ್ತಿಯನ್ನು ಅಥವಾ ಯಾವೊಂದು ವರ್ಗವನ್ನು ಕುರಿತದ್ದಲ್ಲ; ಒಂದು ದುಷ್ಟ ವ್ಯವಸ್ಥೆಯ ವಿರುದ್ಧ ತಳೆದ ನಿಲುವು. ಒಂದು ಮಾತಿನಲ್ಲಿ ಹೇಳುವುದಾದರೆ, ಮತ ಮತ್ತು ಪುರೋಹಿತಶಾಹಿಯ ಉಗ್ರ ಖಂಡನೆ ಮತ್ತು ಶುದ್ಧ ಆಧ್ಯಾತ್ಮದ ಪ್ರತಿಪಾದನೆ ಕುವೆಂಪು ಅವರ ಎರಡೂ ಕಾದಂಬರಿಗಳ ವೈಚಾರಿಕತೆಯ ತಿರುಳಾಗಿದೆ.

ಕಾನೂರು ಹೆಗ್ಗಡಿತಿಯ ಜನತೆಯ ಅಜ್ಞಾನ ಮತ್ತು ಪುರೋಹಿತಶಾಹಿಯ ಕುತಂತ್ರದಿಂದಾಗುವ ದುರಂತಕ್ಕೆ ಇಡೀ ಕಾದಂಬರಿ ಪ್ರತಿಮೆಯಾಗಿದೆ. ಇಲ್ಲಿ ಬರುವ ಅಗ್ರಹಾರದ ಜೋಯಿಸ ವೆಂಕಪ್ಪಯ್ಯ ಪುರೋಹಿತಶಾಹಿಯ ಪ್ರತಿನಿಧಿಯಾಗಿದ್ದರೆ, ಹೂವಯ್ಯ ವೈಚಾರಿಕ ದೃಷ್ಟಿಯನ್ನು ಪ್ರತಿನಿಧಿಸುತ್ತಾನೆ. ಈ

ಎರಡಕ್ಕೂ ನಡೆಯುವ ಸಂಘರ್ಷ, ಅಂತಿಮವಾಗಿ ವೈಚಾರಿಕತೆಯ ಗೆಲವು ಕಾದಂಬರಿಗಳಲ್ಲಿ ಕಂಡುಬರುತ್ತದೆ. ಒಮ್ಮೆ ಭೂತಾರಾಧನೆಯಲ್ಲಿ ಬಲಿಯಾಗಬೇಕಿದ್ದ ಹೋತವೊಂದನ್ನು ಹೂವಯ್ಯ ರಕ್ಷಿಸುವ ಕ್ರಿಯೆ ಸಾಂಕೇತಿಕವಾಗಿದೆ. ಮುಂದೆ ಸಮಾಜವನ್ನು ಹೊಸ ದಿಕ್ಕಿನತ್ತ ಕರೆದೊಯ್ಯುತ್ತದೆ. ಜನಸಾಮಾನ್ಯರು ಹಿಂದುಳಿಯಲು ಒಂದು ಮುಖ್ಯ ಕಾರಣ ಸಾಕ್ಷರತೆಯ ಅಭಾವ. ಪುರೋಹಿತಶಾಹಿ ಸಾರ್ವತ್ರಿಕ ಶಿಕ್ಷಣವನ್ನು ಪ್ರೋತ್ಸಾಹಿಸುವುದಿಲ್ಲ. ವೆಂಕಪ್ಪಯ್ಯ ಜೋಯಿಸರು ಚಂದ್ರಯ್ಯಗೌಡರಿಗೆ ಹೇಳುವ ಈ ಮಾತು ಗಮನಾರ್ಹವಾಗಿದೆ.

‘‘ನಾನು ಹೇಳಿದ್ದೆ ನಿನಗೆ ಮೊದಲೇ ಈಗಿನ ವಿದ್ಯಾಭ್ಯಾಸ ಹುಡುಗರನ್ನು ಹಾಳು ಮಾಡಿಬಿಡುತ್ತದೆ. ದೇವರು ದಿಂಡರು ಭಕ್ತಿಗಿಕ್ತಿ ಎಲ್ಲ ಮಾಯವಾಗುತ್ತದೆ. ಜೊತೆಗೆ ನೂರಾರು ಹವ್ಯಾಸ ಕಲಿಯುತ್ತಾರೆ. ನಿನ್ನ ಮನೆ ಜಮೀನು ಉಳಿಯಬೇಕಾದರೆ ರಾಮಯ್ಯ, ಹೂವಯ್ಯರು ಓದು ನಿಲ್ಲಿಸಿ ಮದುವೆಗಿದುವೆ ಮಾಡಿ ಕೆಲಸಕ್ಕೆ ಹಚ್ಚು... ಎಂದು ಉಪದೇಶಿಸುತ್ತಾರೆ.’’[೧] ಇದರಿಂದ ಬ್ರಾಹ್ಮಣರು ಶೂದ್ರರೂ ವೇದೋಪನಿಷತ್ತುಗಳನ್ನು ಓದುವುದಿರಲಿ ಆಧುನಿಕ ವಿದ್ಯಾಭ್ಯಾಸ ಪಡೆವುದನ್ನೂ ಸಹಿಸರು.

ಈ ಪುರೋಹಿತಶಾಹಿಯ ಪ್ರಾತಿನಿಧಿಕ ರೂಪದಂತಿರುವ ವೆಂಕಪ್ಪಯ್ಯರ ಉದ್ಯೋಗಗಳಲ್ಲಿ ಮುಖ್ಯವಾದುವೆಂದರೆ ದೇವರ ಪೂಜೆ, ನಿಮಿತ್ತ ನೋಡುವುದು. ಭವಿಷ್ಯತ್ತು ಹೇಳುವುದು, ಜಾತಕ ಬರೆಯುವುದು ಮತ್ತು ನೋಡುವುದು, ಲಗ್ನಕ್ಕೆ ಮುಹೂರ್ತ ಇಟ್ಟುಕೊಡುವುದು, ಮಂತ್ರದಿಂದ ದೆವ್ವಗಳನ್ನು ಬಿಡಿಸುವುದು ಮತ್ತು ಹಿಡಿಸುವುದು.

ಆದಕಾರಣ ಹಳ್ಳಿಯವರಿಗೆಲ್ಲಾ ಅವರನ್ನು ಕಂಡರೆ ಭಯ. ಆರ್ಥಿಕವಾಗಿ ಒಕ್ಕಲಿಗರಷ್ಟು ಬಲಾಢ್ಯರಾಗಿಲ್ಲದಿದ್ದರೂ, ಒಕ್ಕಲಿಗರು ಮತ್ತು ಇತರರು ನೀಡುವ ದಾನದಕ್ಷಿಣೆಗಳಿಂದಲೇ ಜೀವನ ನಿರ್ವಹಣೆ ಮಾಡಿಕೊಳ್ಳುತ್ತಿದ್ದರೂ, ಸ್ವತಃ ಸಂಪತ್ತನ್ನು ಉತ್ಪಾದಿಸುವ ಯಾವ ಕ್ಷೇತ್ರವನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳದೇ ಇದ್ದರೂ ವೆಂಕಪ್ಪಯ್ಯ ಬ್ರಾಹ್ಮಣೇತರರ ಮೇಲೆ ಇಟ್ಟುಕೊಂಡಿರುವ ನಿಯಂತ್ರಣ ಸಾಕಷ್ಟು ಗಟ್ಟಿಯಾಗಿಯೇ ತೋರುತ್ತದೆ. ಈ ನಿಯಂತ್ರಣಕ್ಕೆ ಒಂದು ಬಗೆಯ ಧಾರ್ಮಿಕ, ಬೌದ್ಧಿಕ, ಸಾಂಸ್ಕೃತಿಕ ಲೇಪ ಇದೆ. ಒಕ್ಕಲಿಗರು ಇತರ ಕೆಳಜಾತಿಗಳೊಂದಿಗೆ ಊಟ, ಉಡುಗೆ, ಆಚಾರಗಳಲ್ಲಿ ಒಂದು ಅಂತರವನ್ನು ಕಾಯ್ದುಕೊಂಡಿರುವಂತೆ ಬ್ರಾಹ್ಮಣರು ಒಕ್ಕಲಿಗರಿಂದ ಇನ್ನೂ ಹೆಚ್ಚಿನ ಅಂತರವನ್ನು ಕಾಯ್ದುಕೊಂಡಿದ್ದಾರೆ.

ಕಾನೂರು ಹೆಗ್ಗಡಿತಿ ಸಾಮಾಜಿಕ ಶ್ರೇಣಿಗಳಲ್ಲಿ ದೈನಂದಿನ ಜೀವನ ಕ್ರಮದಲ್ಲೇ ಇರುವ ಅಂತರಗಳನ್ನು ಸೂಕ್ಷ್ಮವಾಗಿ ದಾಖಲಿಸುತ್ತದೆ. ಬಹಳಷ್ಟು ವೃತ್ತಿಗಳು ಜಾತಿ ಮೂಲವೇ ಆಗಿವೆ. ಇದು ಬದಲಾಗುವುದು ಹೆಚ್ಚಿನ ಜನರಿಗೆ ಬೇಡವಾಗಿದೆ. ತಮ್ಮ ತಮ್ಮ ವರ್ಗಗಳ ಅಂತರ ಏನೇ ಇರಲಿ ತಮ್ಮ ಜಾತಿ ಮಾತ್ರ ಎಲ್ಲರಿಗೂ ಮುಖ್ಯ ವರ್ಗಾಂತರ ಕೊನೆಯ ಪಕ್ಷ ಕಷ್ಟ. ಆದರೆ ಜಾತಿಯ ಚೌಕಟ್ಟಿನಿಂದ ಹೊರಬರಲು ಯಾರಿಗೂ ಇಚ್ಛೆಯಿಲ್ಲ. ಜಾತಿಯ ಬೇರುಗಳು ಅಷ್ಟು ಆಳವಾಗಿದೆ. ಮತಾಂತರ ಕೂಡ ಅವುಗಳನ್ನು ಕಿತ್ತು ಎಸೆಯಲಾರದು ತಿಮ್ಮ ಕಿಲಿಸ್ತರ ಮಾರ್ಕನಿಗೆ ಹೇಳುತ್ತಾನೆ;

೧. ಕಾನೂರು ಹೆಗ್ಗಡಿತಿ – ಕುವೆಂಪು, ಪುಟ ೭೪

''ನೀವು ಹಾಂಗೆ ತಾತ್ಸಾರ ಮಾಡಬೇಡಿ ನೋಡಿ, ನಿಮ್ಮ ಜಾತಿಯವರೇ ಆ ಸೀತೇ ಮನೆ ಜಾಕಣ್ಣ ಅವನೂ ಮದ್ಲು ಮದ್ಲು ಬಂದ್ಹಾಗ ನಮ್ಮ ದೆಯ್ಯ ದ್ಯಾವರನ್ನು ಹಾಸ್ಯ ಮಾಡ್ತಿದ್ದ. ಒಂದು ಸಾರಿ ಚೌಡಿ ಕೊಡ್ತು ರಕ್ತಾ ಕಾರ್ಕೊಳ್ಳೋ ಹಾಂಗೆ! ಆಮೇಲೆ ನಮ್ಮ ದೆಯ್ಯ, ದ್ಯಾವ್ರಿಗೆ ಹರಕೆ ಹೇಳ್ತಾನೆ; ಕೋಳಿ, ಕುರಿ ಕೊಡ್ತಾನೆ... ಎಲ್ಲ ಭೂತರಾಯನ ಚ್ಯಾಷ್ಟೆ. ನಾಳೆ ನಾಡ್ದಿನ ಹಾಂಗೆ ನಮ್ಮ ಭೂತರಾಯನ ಹರಕೆ ಆಗ್ತದೆ ನೀವೂ ಇದ್ದು ಧೂಪ ಹಾಕಿ, ಪಾರ್ತನೆ ಮಾಡಿ.

ಆ ಕಾಡು, ಆ ಕತ್ತಲೆ, ಆ ಉದ್ವೇಗ, ಸಂದೇಹವೇನೆಂಬುದನ್ನೇ ಅರಿಯದ ತಿಮ್ಮನ ಆ ಶ್ರದ್ಧಾವಣಿ ಇವುಗಳಿಂದ ಮಾರ್ಕನ ಚರ್ಮದಲ್ಲಿ ಮಾತ್ರವಿದ್ದ ಕ್ರೈಸ್ತಮತ ಅಳುಕಿತು. ನಡೆದುದನ್ನು ನೆನೆದಂತೆಲ್ಲ ತಿಮ್ಮನ ಉಪಪತ್ತಿಯ ಋಜುವಾಗುವಂತೆ ತೋರಿತು.''[೧]

ಸಾಮಾಜಿಕ ಕಟ್ಟಳೆಗಳಿಗೆ ಆರ್ಥಿಕ ಆಯಾಮಗಳಿಗಿಂತ ಹೆಚ್ಚಾಗಿ ಭಾವನಾತ್ಮಕ ಆಯಾಮಗಳಿರುವುದರಿಂದ ಇವುಗಳನ್ನು ಕೊನೆಯ ಪಕ್ಷ ಗುಟ್ಟಾಗಿ, ವೈಯಕ್ತಿಕ ಮಟ್ಟದಲ್ಲಿ ಮೀರುವ ಪ್ರಯತ್ನಗಳನ್ನು ಕಾದಂಬರಿ ಗಮನಿಸಿದೆ. ಉದಾಹರಣೆಗೆ :– ''ಭೈರನು ಬೇಲರವನು; ಅಸ್ಪೃಶ್ಯನು, ಆದರೂ ಯಾರೂ ಕಾಣದ ಕಾಡಿನಲ್ಲಿ ಸೆಟ್ಟರು ಬಗನಿಯ ಹಾಳೆಯಲ್ಲಿ ಅವನು ಬೊಗ್ಗಿಸಿ ಕೊಟ್ಟ ನೊರೆಗಳನ್ನು ಚೆನ್ನಾಗಿ ಹೀರಿದರು. ಆಗಲೇ ಮಧ್ಯಾಹ್ನದ ಸಮಯವಾಗಿತ್ತು, ಇಬ್ಬರೂ ಒಬ್ಬರ ಗುಟ್ಟನ್ನೊಬ್ಬರು ಮನಸ್ಸಿನಲ್ಲಿಟ್ಟುಕೊಂಡು ಕಾನೂರಿನ ಕಡೆಗೆ ಇಳಿದರು.''[೨]

ಮದ್ಯಪಾನ ಮಿತಿಮೀರಿ ಮೂರ್ಛೆ ಹೋಗುತ್ತಿದ್ದ ಓಬಯ್ಯ ತನ್ನ ಗುಟ್ಟು ಬಚ್ಚಿಟ್ಟುಕೊಳ್ಳಲು ಭೂತರಾಯನ ಕಥೆಗಳನ್ನು ಕಟ್ಟಿ ಹೇಳುತ್ತಿರುತ್ತಾನೆ. ಈ ಮೂಲಕ ಜನರ ಧಾರ್ಮಿಕ ನಂಬಿಕೆಯನ್ನೇ ತನ್ನ ತಂತ್ರವಾಗಿ ಮಾಡಿಕೊಳ್ಳುವುದರ ಮೂಲಕ ಈ ನಂಬಿಕೆಗಳ, ಅವುಗಳ ಹಿಂದಿನ ಮೌಲ್ಯಗಳ ಹಾಸ್ಯಾಸ್ಪದ ಸ್ವರೂಪವನ್ನು ನಗ್ನಗೊಳಿಸುತ್ತಾನೆ. ಈ ದೃಷ್ಟಿಯಿಂದ ನೋಡಿದಾಗ

ಇಲ್ಲಿ ಬಂಡಾಯ ಶಿಷ್ಟವಾಗಿಲ್ಲದಿದ್ದರೂ ಬದುಕನ್ನು ಸಫಲಗೊಳಿಸಿಕೊಳ್ಳುವ ಒಳದಾರಿಗಳನ್ನು ಈ ಜನ ಶೋಧಿಸಿಕೊಂಡ ಅಂಶವನ್ನು ಗಮನಿಸದೇ ಇರಲು ಸಾಧ್ಯವಿಲ್ಲ. ಇವರು ಅವಿದ್ಯಾವಂತರಾಗಿರುವುದರಿಂದ ಮತ್ತು ಸೀಮಿತ ಅವಕಾಶಗಳಲ್ಲಿ ಬದುಕು ಸಾಗಿಸುವವರಾದ್ದರಿಂದ ಇವರ ಪ್ರತಿಕ್ರಿಯೆಗಳ, ಪ್ರತಿಭಟನೆಯ ಪರಿಭಾಷೆಯೂ ಭಿನ್ನವಾಗಿರುತ್ತದೆ. ಇದು ಹಿಂಸೆ, ಸುಳ್ಳು, ವಂಚನೆ, ತಮಾಷೆ ಮುಂತಾದವುಗಳ ಮೂಲಕ ವ್ಯಕ್ತವಾಗಬಹುದು.

ಹಾಗಾಗಿ ಜಾತಿ ಕಟ್ಟಳೆಗಳ, ಸಾಮಾಜಿಕ ರೀತಿ–ನೀತಿಗಳಲ್ಲಿ ಮೊಳೆಯುವ ಅಶಾಂತಿ, ಅತಿಕ್ರಮಣಗಳ ಸಾಧ್ಯತೆಗಳನ್ನು ಕಾದಂಬರಿ ಸೂಚಿಸುತ್ತದೆ. ಕೆಳಜಾತಿ ವರ್ಗಗಳಲ್ಲಿ ಪ್ರತಿಭಟನೆಯ ಸ್ವರೂಪ ಹೀಗೆ ತೀರ ಕೆಳಸ್ತರದಲ್ಲಿದ್ದರೆ, ಕೆಲವೊಮ್ಮೆ ಲಘು ಎನಿಸಿದರೆ ಪ್ರತಿಷ್ಠಿತ ಭೂಮಾಲೀಕ ವರ್ಗದ ವಿಶಿಷ್ಟ ವ್ಯಕ್ತಿಗಳ ಬಂಡಾಯ ಸಹಜವಾಗಿಯೇ ಹೆಚ್ಚಿನ ಶಿಷ್ಟತೆಯನ್ನು ಒಂದು ಬಗೆಯ ತರ್ಕವನ್ನೂ ಕೆಲವೊಮ್ಮೆ ಉಗ್ರಗಾಮಿತ್ವವನ್ನೂ ಪಡೆದುಕೊಳ್ಳುತ್ತದೆ. ಅಲ್ಲದೆ ಪುರೋಹಿತಶಾಹಿ ಮತ್ತು ಭೂಮಾಲೀಕ ವರ್ಗ ಒಟ್ಟಾಗಿ, ಒಂದು ಮಟ್ಟದ ಸಮತೋಲನದಲ್ಲಿ ಎಲ್ಲ ಕೆಳಜಾತಿ ವರ್ಗಗಳನ್ನು ವಿವಿಧ

---

೧. ಕಾನೂರು ಹೆಗ್ಗಡಿತಿ – ಕುವೆಂಪು, ಪುಟ ೨೩೮-೨೩೯

೨. ಕಾನೂರು ಹೆಗ್ಗಡಿತಿ – ಕುವೆಂಪು, ಪುಟ ೫೧

ರೀತಿಗಳಲ್ಲಿ ಶೋಷಿಸಿಕೊಂಡು ಹೋಗುವುದಕ್ಕೂ ಸಾಧ್ಯತೆಗಳು ವಿಪುಲವಾಗಿದೆ. ಪರಸ್ಪರರಿಗೆ ಕುಮ್ಮಕ್ಕು ಕೊಡುತ್ತ , ಪರಸ್ಪರ ಶಕ್ತಿಗಳನ್ನು ಗೌರವಿಸಿಕೊಳ್ಳುತ್ತ ಈ ಸಂಯುಕ್ತ ಶಕ್ತಿಗಳ ಸಂಘಟಿತ ಬಲದಿಂದ ಉಳಿದ ಬಹುಸಂಖ್ಯಾತರನ್ನು ಸದಾಕಾಲ ವಂಚಿಸುವ ಅತಿ ಭೀಕರ ಸಾಮಾಜಿಕ ಸತ್ಯಗಳನ್ನು ಕಾದಂಬರಿ ಬಯಲು ಮಾಡುತ್ತದೆ.

ಹೂವಯ್ಯನು ಬೆನ್ನು ನೋವಿನಿಂದ ಮಲಗಿದ್ದಾಗ ಜೋಯಿಸರಾದ ವೆಂಕಪ್ಪಯ್ಯ ಪೂಜೆ, ತಾಯಿತಗಳ ಪ್ರಸ್ತಾಪ ಮಾಡಿದಾಗ ಅವರಿಬ್ಬರಿಗೂ ಬಿಸಿಬಿಸಿಯಾದ ಚರ್ಚೆ ನಡೆಯುತ್ತದೆ. ''ಸಿಂಗಪ್ಪ ಗೌಡರೂ, ಶ್ಯಾಮಯ್ಯಗೌಡರೂ ಜೋಯಿಸರ ಪರವಾಗಿಯೂ, ಚಿನ್ನಯ್ಯ ರಾಮಯ್ಯರು ಹೂವಯ್ಯನ ಪರವಾಗಿಯೂ ಮಾತಾಡತೊಡಗಿದರು! ಇದು ಅಸಹಜವೇನಲ್ಲ. ಏಕೆಂದರೆ ಇಲ್ಲಿ ಪೀಳಿಗೆಗಳ ನಡುವೆ ಅಂತರವೂ ಇದೆ. ಅಲ್ಲದೆ ಹೂವಯ್ಯ ಚಿನ್ನಯ್ಯ , ರಾಮಯ್ಯ ಆಧುನಿಕ ವಿದ್ಯಾಭ್ಯಾಸ ಪಡೆದವರು. ವೆಂಕಪ್ಪಯ್ಯ , ಸಿಂಗಪ್ಪಗೌಡರು, ಶ್ಯಾಮಯ್ಯಗೌಡರು ಹಳೆಯ ಕಾಲದವರು, ಹಳೆಯ ಮೌಲ್ಯ ವ್ಯವಸ್ಥೆಯ ಲಾಭ ಪಡೆದವರು. ಭೂಮಾಲೀಕ ವರ್ಗ ಜೀತದಾಳುಗಳ ಮೇಲೆ ತನ್ನ ಸಂಪೂರ್ಣ ನಿಯಂತ್ರಣ ಸಾಧಿಸಲು ಭಯ ಭಕ್ತಿಗಳ ಬೌದ್ಧಿಕ ಆವರಣವೊಂದನ್ನು ಸೃಷ್ಟಿಸಿಕೊಂಡಿರುತ್ತದೆಯಷ್ಟೇ. ಹಾಗಾಗಿ ಇಂಥ ಭಯ ಭಕ್ತಿಗಳ ಜನಕರಾದ ಬ್ರಾಹ್ಮಣರನ್ನು ಸಮರ್ಥಿಸುವುದರಲ್ಲಿ ಇವರ ವರ್ಗಾಸಕ್ತಿಗಳೂ ಕಾಯಲ್ಪಡುತ್ತದೆ. ಚಿನ್ನಯ್ಯ ರಾಮಯ್ಯ ಮತ್ತು ಹೂವಯ್ಯರ ಪ್ರತಿಕ್ರಿಯೆಗಳು ಕ್ರಾಂತಿಕಾರಕ ಎಂದು ಹೇಳಲಾಗದಿದ್ದರೂ ಮತ್ತು ಅವರ ಬೌದ್ಧಿಕ ಮತ್ತು ಭಾವನಾತ್ಮಕ ನಡವಳಿಕೆಗಳಲ್ಲಿ ಸಮತೋಲನ ಇಲ್ಲದಿದ್ದರೂ ಅವರಿಗೆ ತಮ್ಮ ಹೊಸ ಬಗೆಯ ಸಂಸ್ಕಾರ ಕೊನೆಯ ಪಕ್ಷ ತಮ್ಮ ವರ್ಗಸ್ಥಿತಿಯ ಅಸಮಗ್ರ ಅರಿವನ್ನಾದರೂ ತಂದುಕೊಡುವುದು ತುಂಬ ಮುಖ್ಯವಾದ ಸಂಗತಿಯಾಗಿದೆ. ಅಸಮಗ್ರ ಅರಿವು ಏಕೆಂದರೆ ಆಧುನಿಕ ವಿದ್ಯಾಭ್ಯಾಸದ ಸಂಸ್ಕಾರ ಸೀಮಿತವಾದದ್ದು. ಅದು ಅವರಿಗೆ ಬ್ರಾಹ್ಮಣರು ತಮ್ಮನ್ನು ಕೀಳಾಗಿ ಕಾಣುತ್ತಿದ್ದಾರೆ ಎಂಬ ಅರಿವನ್ನು ತಂದುಕೊಡುತ್ತದೆಯೇ ಹೊರತು ಶ್ರೇಣೀಕೃತ ಸಾಮಾಜಿಕ, ಆರ್ಥಿಕ ವ್ಯವಸ್ಥೆಯೊಂದರಲ್ಲಿ ತಾವೂ ತಮಗಿಂತ ಕೆಳಗಿನ ಜಾತಿ–ವರ್ಗಗಳನ್ನು ಅದೇ ರೀತಿ ನಡೆಸಿಕೊಳ್ಳುವ ದ್ವಂದ್ವ ಸತ್ಯವನ್ನು ಹೊಳಯಿಸಿ ಕೊಡುವುದಿಲ್ಲ. ಏಕೆಂದರೆ ತಾವೂ ಶೋಷಣೆಗೆ ಒಳಗಾಗುತ್ತಾ ಬೇರೆಯವರನ್ನ ಶೋಷಣೆ ಮಾಡುತ್ತಾ ಇರುತ್ತಾರೆ. ಹೀಗಾಗಿ ಆಧುನಿಕ ವಿದ್ಯಾಭ್ಯಾಸ ಈ ವರ್ಗಗಳಿಗೆ ನವಬ್ರಾಹ್ಮಣತ್ವವನ್ನು ತಾನಾಗಿಯೇ ಪ್ರಾಪ್ತ ಮಾಡುವ ಸಾಂಸ್ಕೃತಿಕ ಪ್ರಕ್ರಿಯೆಯನ್ನು ಗಮನಿಸದೇ ಇರಲು ಸಾಧ್ಯವಿಲ್ಲ. ನವ ವಿದ್ಯಾವಂತ ವರ್ಗದ ಮತ್ತು ನವ ಬ್ರಾಹ್ಮಣ ವರ್ಗದ ದ್ವಂದ್ವಗಳು ಹಾಸ್ಯಾಸ್ಪದ ಎನ್ನಿಸಿದರೂ ಅವು ನಿಜ ಮತ್ತು ಅನಿವಾರ್ಯ. ಇವರು ಪ್ರಾಚೀನರು ಹೌದು, ನವೀನರೂ ಹೌದು. ಕಾನೂರು ಹೆಗ್ಗಡಿತಿ ಶೋಧಿಸ ಬಯಸುವ ಪ್ರಾಚೀನ ನವೀನಗಳ ಸ್ನೇಹ ಸಮರಗಳ ದ್ವಂದ್ವ ಈ ಸಂದರ್ಭಗಳಲ್ಲಿ ತನ್ನ ಅತ್ಯುತ್ತಮ ಅಭಿವ್ಯಕ್ತಿಯನ್ನು ಪಡೆದುಕೊಂಡಿದೆ. ಉದಾ :– ಚಿನ್ನಯ್ಯ ಪುಟ್ಟಮ್ಮ ಗಂಡು ಮಗುವೊಂದನ್ನ ಪಡೆದಾಗ ;

''ಅಗ್ರಹಾರದ ವೆಂಕಪ್ಪ ಜೋಯಿಸರು ಕೂಸಿಗೆ 'ಕರಿಯಣ್ಣ' ಎಂದು ಹುಟ್ಟು ಹೆಸರು ಇಟ್ಟುಕೊಂಡಿದ್ದರು. ಚಿನ್ನಯ್ಯ ಈ ಹಾರುವರ ದೆಸೆಯಿಂದ ನಮಗೆ ಉಳಿಗಾಲವಿಲ್ಲ! ನಮಗೆ ವಿದ್ಯೆಬುದ್ಧಿ ಚೆನ್ನಾಗಿ ಕೊಡಲಿಲ್ಲವಲ್ಲಾ, ಹೋಗಲಿ! ಒಳ್ಳೊಳ್ಳೆ ಹೆಸರುಗಳನ್ನಾದರೂ ಇಟ್ಟುಕೊಡಬಾರದೆ! ಅದಕ್ಕೂ

ಹೊಟ್ಟೆಕಿಚ್ಚು ಅಂತಾ ಕಾಣ್ತದೆ, ಕರಿಯ, ಸಿಂಡ, ತಿಮ್ಮ, ಕಾಳ, ಬೋಳ ಇವೇ ನಮ್ಮ ಪಾಲಿಗೆ! ಎಂದು ಹೂವಯ್ಯನಿಗೆ ಒಂದು ಒಳ್ಳೆಯ ಹೆಸರನ್ನು ಕರೆಯುವಂತೆ ಹೇಳಿದನು.''[೧]

ಕೊನೆಗೆ ಮಗುವಿಗೆ ರಮೇಶ ಎಂದು ಹೆಸರಿಡಲಾಗುತ್ತದೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಚಿನ್ನಯ್ಯ ಒಂದು ನಿಟ್ಟಿನಲ್ಲಿ ಬ್ರಾಹ್ಮಣರನ್ನು ಟೀಕಿಸುತ್ತಿದ್ದರೆ, ಇನ್ನೊಂದು ನಿಟ್ಟಿನಲ್ಲಿ ಬ್ರಾಹ್ಮಣರ ಹಾಗೆಯೇ ಯೋಚಿಸುತ್ತಿದ್ದಾನೆ. ಬ್ರಾಹ್ಮಣರ ದೃಷ್ಟಿಯಲ್ಲಿ ಯಾವುದು ಸುಂದರ ಅಥವಾ ಕುರೂಪವೂ ಚಿನ್ನಯ್ಯನ ದೃಷ್ಟಿಯಲ್ಲಿಯೂ ಅದೇ ಆಗುತ್ತದೆ.

ನವಬ್ರಾಹ್ಮಣತ್ವದ ಅತ್ಯುತ್ತಮ ಪ್ರತೀಕವೆಂದರೆ ಹೂವಯ್ಯ. ಅವನು ತೆಗೆದುಕೊಳ್ಳುವ ನಿಲುವುಗಳು ಬಲಿ ಇತ್ಯಾದಿಗಳನ್ನು ವಿರೋಧಿಸುವ ಹೂವಯ್ಯ ಫಲ ಪುಷ್ಪಗಳ ಅರ್ಪಣೆಯ ವಿರೋಧಿ ಯೇನಲ್ಲ. ಸೂಕ್ಷ್ಮವಾಗಿ ಗಮನಿಸಿದಾಗ ಬ್ರಾಹ್ಮಣರು ಶೂದ್ರರ ಬಗ್ಗೆ ಪ್ರಕಟಿಸುವ ತಿರಸ್ಕಾರಗಳನ್ನೇ ಹೂವಯ್ಯ ಕೂಡಾ ಪ್ರಕಟಿಸಿ ಅಂತಿಮವಾಗಿ ಬ್ರಾಹ್ಮಣರ ಪೂಜಾ ವಿಧಾನಗಳನ್ನೇ ಎತ್ತಿಹಿಡಿಯುತ್ತಾನೆ. ಬ್ರಾಹ್ಮಣರ ಹಾಗೆ ಪುರಾಣ ಹೇಳುವುದು, ಮೂರ್ತಿ ಪೂಜೆ ಮಾಡುವುದು, ಮಾಂಸಾಹಾರ ತ್ಯಜಿಸುವುದು ರೈತಾಪಿ ಕುಟುಂಬಗಳಲ್ಲಿ ಹುಟ್ಟಿದ್ದರೂ ಹೊಲಗದ್ದೆಗಳ ದುಡಿಮೆಗಿಂತ ಧ್ಯಾನ–ಭಜನೆಗಳಲ್ಲಿ ಹೆಚ್ಚಿನ ಆಸಕ್ತಿ ತೋರುವುದು. ಹೀಗೆ ಬ್ರಾಹ್ಮಣರನ್ನು ಉಗ್ರವಾಗಿ ಖಂಡಿಸುತ್ತಲೇ ಬ್ರಾಹ್ಮಣರಿಗೆ ತಗ್ಗಿಬಗ್ಗಿ ನಡೆಯುವ ಶೂದ್ರರಿಗಿಂತ ಹೆಚ್ಚಾಗಿ ಬ್ರಾಹ್ಮಣ ಮೌಲ್ಯಗಳ ಆರಾಧಕನಾಗಿ ಬಿಡುತ್ತಾನೆ ; ಆ ಮೂಲಕ ತಾನೇ ಬ್ರಾಹ್ಮಣನಾಗ ಹೊರಡುತ್ತಾನೆ.

ಕಾನೂರು ಹೆಗ್ಗಡಿತಿಯ ಸಮಾಜವಂತೂ ಮೇಲುನೋಟಕ್ಕೆ ಸಂಘರ್ಷಗಳ ಗೈರು ಹಾಜರಿಯಿಂದಾಗಿ ಬೆರಗು ಹುಟ್ಟಿಸುವಂಥದು. ಕಾದಂಬರಿಯ ಬಂಧನ ಮುಖ್ಯ ಕೇಂದ್ರದಲ್ಲಿ ಈ ರೀತಿಯ ಸಾಮಾಜಿಕ ಸಂಘರ್ಷಗಳಿಲ್ಲ. ಇಲ್ಲಿಯ ಮುಖ್ಯ ಕೇಂದ್ರ ಎಂದರೆ ಹೂವಯ್ಯ ಮೂಲತಃ ಈತ ಒಂದು ಪ್ರಜ್ಞೆ. ಕಾದಂಬರಿಯ ಬಂಧದ ಉಳಿದ ಅಂಗಗಳ ಮೇಲೂ ಈ ಪ್ರಜ್ಞೆ ತನ್ನ ಪ್ರಭಾವವನ್ನು ಬೀರಿ ಉಳಿದ ಸಂಗತಿಗಳನ್ನು ಗೌಣವಾಗಿ ಮಾಡಿದೆ. ಹೀಗೆಂದ ಮಾತ್ರಕ್ಕೆ ಆ ಸಮಾಜದಲ್ಲಿ ಇರುವ ವರ್ಗ ಸಂಘರ್ಷವನ್ನು ಕಡೆಗಣಿಸಿದ್ದಾರೆ ಎಂದಲ್ಲ.

ನಿರ್ಣಯಾತ್ಮಕ ಸಂಘರ್ಷಗಳ ಗೈರು ಹಾಜರಿಯೇ ಈ ರೀತಿಯ ಸಮಾಜ ವ್ಯವಸ್ಥೆಯ ಮುಖ್ಯ ಲಕ್ಷಣ. ''ಸಮಾಜ ಶಾಸ್ತ್ರಜ್ಞ ಚಿತೆ ಸಮರಸ್ಯಭರಿತ ಸಾಮಾಜಿಕ ರಚನೆ ಎಂದು ಕರೆಯುವುದು ಇಂತಹ ಸೌಮ್ಯ ಸ್ಥಿತಿಯನ್ನೆ ವರ್ಗಗಳು ಪ್ರಜ್ಞಾವಂತ ವರ್ಗಗಳಾಗಿ ರೂಪುಗೊಂಡು ಪ್ರಗತಿಪರ ಚಾರಿತ್ರಿಕ ಹೋರಾಟ ನಡೆಸುವುದು. ಇಂತಹ ಸಮಾಜಗಳಲ್ಲಿ ಅಸಾಧ್ಯ ಕೂಡಾ.''[೨]

ತುಂಬಿ ತುಳುಕುವ ದಾರಿದ್ರ್ಯವಿದ್ದರೂ, ಶೋಷಣೆಯಿದ್ದರೂ ಒಂದು ವರ್ಗ ತನಗಾಗಿ ಪ್ರತಿಭಟಿಸುವುದು ಸಾಧ್ಯವಾಗುವುದಿಲ್ಲ. ಬಂಡವಾಳಶಾಹಿ ಸಮಾಜ ವ್ಯವಸ್ಥೆಗಳಲ್ಲಿ ವಾಸ್ತವ ವ್ಯವಸ್ಥೆ

---

೧. ಕಾನೂರು ಹೆಗ್ಗಡಿತಿ –ಕುವೆಂಪು, ಪುಟ ೬೨೬

೨. ಕುವೆಂಪು ಕೃತಿಗಳಲ್ಲಿ ವರ್ಣ–ವರ್ಗ–ಸಂಘರ್ಷ–ಅಮೃತ ಮತ್ತುಗರುಢ – ಡಿ.ಆರ್.ನಾಗರಾಜ್

ಮತ್ತು ನ್ಯಾಯಬದ್ಧ ವ್ಯವಸ್ಥೆಗಳ ನಡುವೆ ಘರ್ಷಣೆ ಖಚಿತವಾಗಿ ರೂಪುಗೊಂಡಿರುವುದಿಲ್ಲ. ಇಲ್ಲಿರುವ ಅಶಾಂತಿಯ ಸಂಘರ್ಷದ ಸ್ವರೂಪವೇ ಬೇರೆ. ಇದನ್ನೆ ಊಳಿಗಮಾನ್ಯ ಪದ್ಧತಿಯೊಳಗೆ ನಡೆಯುವ ಮೌನ ಸಂಘರ್ಷ ಎನ್ನುವುದು. ತತ್ವಜ್ಞಾನಿ ಹೂವಯ್ಯ ಗುರುತಿಸಿಲ್ಲದ ಸಂಘರ್ಷವನ್ನು ಕುವೆಂಪು ಗುರುತಿಸಿದ್ದಾರೆ. ಕಾನೂರು ಹೆಗ್ಗಡಿತಿ ಕೆಳಕಾನೂರು ಅಣ್ಣಯ್ಯಗೌಡರ ಕಥೆ ಇದಕ್ಕೆ ಉದಾಹರಣೆ. ಊಳಿಗಮಾನ್ಯ ಶೋಷಣೆಯ ಬಲಿಪಶು ಅಣ್ಣಯ್ಯಗೌಡರು ಹೂವಯ್ಯನ- ಸುಂದರ ಆಧ್ಯಾತ್ಮಿಕ ಲೋಕದೊಳಗಡೆಯೇ ಉಗ್ರ ಶೋಷಣೆಯ ಧಾರುಣ ಲೋಕವೂ ಅಡಗಿದೆ. ಆದರೆ ಇಲ್ಲಿ ಅದು ಗೌಣ ಅಷ್ಟೇ. ಆದರೆ ಈ ಸೌಮ್ಯ ಸಮಾಜದೊಳಗೂ ಅಶಾಂತಿಯ ಜ್ವಾಲಾಮುಖಿಗಳಿವೆ ಎಂಬುದು ಅಣ್ಣಯ್ಯಗೌಡರ ಕಥೆಯಿಂದ ಸ್ಪಷ್ಟ. ಕಾನೂರು ಹೆಗ್ಗಡಿತಿಯ ಸೀತೆಯ ಬಾಳು ಹಾಳಾಗುವುದಕ್ಕೆ ವೆಂಕಪ್ಪಯ್ಯನೇ ಕಾರಣ. ಅವಳು ಹೂವಯ್ಯನನ್ನು ವರಿಸುವುದನ್ನು ಜಾತಕತಂತ್ರದಿಂದ ತಪ್ಪಿಸಿ ರಾಮಯ್ಯನೊಡನೆ ಮದುವೆ ಮಾಡಿಸುತ್ತಾನೆ. ಅವಳ ಮಾನಸಿಕ ವ್ಯಾಧಿಗೆ ಚಿಕಿತ್ಸೆ ಮಾಡಿಸುವ ಬದಲು ಬರೆ ಹಾಕಿಸುತ್ತಾನೆ.

ಆದರೆ ಅನರ್ಥಗಳಲ್ಲಿ ಪುರೋಹಿತಶಾಹಿಯ ಪೂರ್ಣವಾಗಿ ನೇರವಾಗಿ ಹೊಣೆಯಲ್ಲ. ಜನ ಮೂಢನಂಬಿಕೆ, ಕಂದಾಚಾರಗಳ ಕೂಪದಲ್ಲಿ ಮುಳುಗಿಕೊಂಡಿದ್ದಾರೆ ; ಹಲವು ಹನ್ನೊಂದು ಕ್ಷುದ್ರ ದೇವತೆಗಳನ್ನು ವಿಕೃತ ವಿಧಾನಗಳಿಂದ ತೃಪ್ತಿಗೊಳಿಸ ಬಯಸುತ್ತಾರೆ ; ತಮ್ಮ ದುರ್ಗತಿಯನ್ನು ಕರ್ಮಫಲವೆಂದು ಸಹಿಸಿಕೊಳ್ಳುತ್ತಾರೆ ; ಮದ್ಯಪಾನ, ವ್ಯಭಿಚಾರ, ಜೂಜುಗಳಂತಹ ದುಶ್ಚಟಗಳನ್ನು ಅಂಟಿಸಿಕೊಂಡಿದ್ದಾರೆ. ಕುವೆಂಪು ಇದನ್ನೆಲ್ಲ ಮುಚ್ಚಿಡದೆ ಬಿಡಿಸಿ ತೋರಿಸಿದ್ದಾರೆ. ಪುರೋಹಿತರ ಕುಮ್ಮಕ್ಕು ವಂಚನೆಗಳನ್ನು ಬೆಳಕಿಗೆ ತರುವಾಗ ಅವರು ಸಾಮಾನ್ಯ ಜನರ ಮೂರ್ಖತನವನ್ನು ಧೂರ್ತತನವನ್ನು ಕೂಡ ಮರೆಯುವುದಿಲ್ಲ. ಸರ್ವೋದಯ ಸಾಧನೆಯಲ್ಲಿ ಅವರಿವರೆನ್ನದೆ ಎಲ್ಲರೂ ಭಾಗವಹಿಸುತ್ತಾರೆ.

'ಮಲೆಗಳಲ್ಲಿ ಮದುಮಗಳು'ವಿನಲ್ಲಿ ಚಿತ್ರಿತವಾಗಿರುವ ಜನಜೀವನ 'ಕಾನೂರು ಹೆಗ್ಗಡಿತಿ' ಜನಜೀವನಕ್ಕಿಂತ ಹಿಂದಿನದು. ಇಲ್ಲಿ ಕುವೆಂಪು ಮಲೆನಾಡಿನ ಜೀವನ ವಿವರಗಳನ್ನು ಹೆಚ್ಚಾಗಿ ನೀಡಿದ್ದಾರೆ. ಅನೇಕ ವಿವರಗಳಲ್ಲಿ ಸಾಮ್ಯತೆ ಇರುವುದಾದರೂ ನೋಡುವ ನೋಟ ಕೊಂಚ ಬೇರೆಯಾಗಿದೆ. ನಂಬಿಕೆಗಳ ಲೋಕ ಇಲ್ಲಿ ಸರಳವಾಗಿಲ್ಲ; ಹೆಚ್ಚು ಸಮಸ್ಯಾತ್ಮಕವಾಗಿದೆ. ಪಾತ್ರಗಳು ಹೆಚ್ಚು ಚಲನಶೀಲವಾಗಿವೆ. ಕಾನೂರು ಹೆಗ್ಗಡಿತಿಯಲ್ಲಿ ಹೂವಯ್ಯ ಎಲ್ಲರಿಗಿಂತ ಮುಖ್ಯ, ವಿಶಿಷ್ಟ ಎಂಬ ಧ್ವನಿಯಿದೆ. ಆದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಒಂದೇ ಕೇಂದ್ರವಿಲ್ಲ. ಕಾನೂರು ಹೆಗ್ಗಡಿತಿ ಯಾವುದು ಕೇವಲ ಮೂಢನಂಬಿಕೆಗಳ ಲೋಕವಾಗಿ ಕಾಣುತ್ತಿತ್ತೋ ಅದು ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ವಿಭಿನ್ನ, ವೈವಿಧ್ಯಮಯ ನಂಬಿಕೆಗಳ ವಿನ್ಯಾಸವನ್ನು ಪಡೆದುಕೊಂಡಿದೆ. ವಸಾಹತುಶಾಸಿ ಚಟುವಟಿಕೆಗಳು 'ಕಾನೂರು ಹೆಗ್ಗಡಿತಿ'ಯಲ್ಲಿ ಸೂಚ್ಯವಾಗಿ ಪ್ರಸ್ತಾಪಿತವಾಗಿದ್ದರೆ 'ಮಲೆಗಳಲ್ಲಿ ಮದುಮಗಳು'ವಿನಲ್ಲಿ ನೇರವಾಗಿ ಸ್ಪಷ್ಟವಾಗಿ ದಾಖಲಾಗಿದೆ.

ಮಲೆನಾಡನ್ನು ಕುರಿತ ಕುವೆಂಪು ನೋಟದಲ್ಲಿ ಕೇವಲ ಮುಗ್ಧತೆ, ರಮ್ಯತೆಗಳಿಲ್ಲ. ಮಲೆನಾಡ ಜೀವನದ ಸರಳ ಸೌಂದರ್ಯವನ್ನು ವರ್ಣಿಸುತ್ತಲೇ ಕಾದಂಬರಿ ಅದರೊಳಗೇ ಅಂತರ್ಗತವಾಗಿರುವ

ರೂಕ್ಷತೆ, ಹಿಂಸ್ರತೆ, ಕ್ರೌರ್ಯಗಳನ್ನು ಎತ್ತಿ ತೋರಿಸುತ್ತದೆ. ಜಾತಿ, ವರ್ಗ, ಲಿಂಗ ಈ ಮೂರು ನೆಲೆಗಳಲ್ಲಿ ಇಲ್ಲಿ ಜೀತಪದ್ಧತಿಯಿದೆ. ಜೀತದಾಳು ಒಂದು ಯಂತ್ರದಂತೆ, ಪ್ರಾಣಿಯಂತೆ ಒಡೆಯನ ಸ್ವತ್ತು ಇವನಿಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಹೆಣ್ಣಿನ ಸ್ಥಿತಿಯೂ ಹೆಚ್ಚು ಕಡಿಮೆ ಇದೇ ಸ್ವರೂಪದ್ದು. ಬ್ರಾಹ್ಮಣ, ಒಕ್ಕಲಿಗ, ದಲಿತ ಹೆಣ್ಣುಗಳ ಒಳಗಣ ಮತ್ತು ನಡುವಣ ಸಾಮಾಜಿಕ ಸ್ಥಾನಮಾನಗಳಲ್ಲಿ ವ್ಯತ್ಯಾಸಗಳಿರಬಹುದಾದರೂ ಲಿಂಗದ ನೆಲೆಯಲ್ಲಿ ಹೆಣ್ಣು ಇಲ್ಲಿ ಕೇವಲ ಗಂಡಿನ ಸ್ವತ್ತು. ಮೇಲ್ಜಾತಿ ವರ್ಗಗಳಲ್ಲಿ ಈ ಅಂಶ ಹೆಚ್ಚು ಜಾತಿ ಶ್ರೇಣೀಕರಣದಲ್ಲಿ ಕೆಳಕ್ಕೆ ಬಂದಂತೆ ಹೆಚ್ಚು ಸಡಿಲಗೊಳ್ಳುತ್ತದೆ.

ಧರ್ಮು, ಕಾಡು, ತಿಮ್ಮ ಕಲ್ಲೂರಿಗೆ ಬಂದಾಗ ತಲೆ ಬೋಳಿಸಿಕೊಂಡ ಬ್ರಾಹ್ಮಣ ವಿಧವೆಯನ್ನು ಕಾಣುತ್ತಾರೆ. ಗಂಡ ಸತ್ತ ನಂತರ ತಲೆ ಬೋಳಿಸುತ್ತಾರೆ. ಬ್ರಾಂಬ್ರಲ್ಲಿ ಎಂಬ ಸಮಾಜ ಶಾಸ್ತ್ರೀಯ ಪಾಠವನ್ನು ಕಾಡು ತಿಳಿಸಿಕೊಡುತ್ತಾನೆ. ತಿರುಪತಿಗೆ ಹೋಗಿದ್ದ ತನ್ನ ಅಪ್ಪಯ್ಯ ಸತ್ತಿದ್ದರೆ, ಅಥವಾ ಸತ್ತರೆ ತನ್ನ ಅವ್ವನೂ ಹೀಗೆ ಮಂಡೆ ಬೋಳಿಸಿಕೊಂಡು ಕೆಂಪು ಸೀರೆ ಉಟ್ಟುಕೊಂಡು ವಿಕಾರಗೊಳ್ಳುತ್ತಾಳೆಯೊ ಏನೊ ಎಂದು ಧರ್ಮುಗೆ ಅತೀವ ದಿಗಿಲು ಸಂಕಟವಾಗುತ್ತದೆ. ಆಗ ಕಾಡನ್ನು ಕೇಳಿದಾಗ ಇಲ್ಲಿ ನಮ್ಮಲ್ಲಿ ಯಾರಿಗೂ ಹೀಂಗೆ ಮಾಡಾದಿಲ್ಲೊ ! ಬ್ರಾಂಬ್ರ ಜಾತಿಯಲ್ಲಿ ಮಾತ್ರ ಹಾಂಗೆ ಎಂದು ಹೇಳಿದಾಗ ಸಮಾಧಾನಗೊಳ್ಳುತ್ತಾನೆ. ಈ ಮಕ್ಕಳ ಸಹಜ ಸಂಭಾಷಣೆ ಜಾತಿ ವ್ಯವಸ್ಥೆಯ ಸೂಕ್ಷ್ಮವೊಂದನ್ನೇ ದೈನಂದಿನ ಜೀವನದ ಅನುಭವದಲ್ಲಿ ಹೊಳೆಯಿಸಿಬಿಡುತ್ತದೆ. ಆದರೆ ಒಂದು ಕಡೆ ಸಡಿಲಬಿಟ್ಟು ಇನ್ನೊಂದು ಕಡೆ ಬಿಗಿ ಮಾಡುವುದು ಭಾರತೀಯ ಜಾತಿ ಪದ್ಧತಿಯ ವೈಶಿಷ್ಟ್ಯ. ಉದಾ :- ಈ ಸಂಭಾಷಣೆ ಗಮನಿಸಿ.

''ಅಪ್ಪಯ್ಯನ ಸಂಗಡ ಒಂದು ಸಾರಿ ಕಲ್ಲೂರು ತೇರಿಗೆ ಬಂದಿದ್ದ ಕಣೋ. ಆಗ ಆ ಭಟ್ಟರ ಮನೇಲೇ ಊಟ ಮಾಡಿದ್ದು ನಾವು. ಹೋಳಿಗೆ ಪಾಯಸ ಏನೇನೋ ಇಕ್ಕಿದ್ರು ಕಣೋ ! ಆದರೆ ಮನೆ ಒಳಗೆ ಬಳ್ಳೆ ಹಾಕಿರಲಿಲ್ಲ ಹೊರಂಗಳದ ಮೂಲೇಲಿ ಹಾಕಿದ್ರೋ! ಅಪ್ಪಯ್ಯನೇ ನನ್ನ ಬಳ್ಳೆನೂ ಎತ್ತಿ ಹಾಕಿ ಅವರೇ ಅಲ್ಲೆಲ್ಲಾ ಗ್ವಾಮಾಯಾನೊ ಹಾಕಿದ್ರು! ನಂಗೆ ಇಸ್ಸಿ ಅನ್ನಿಸಿತು... ಇನ್ನು ಎಂದೆಂದಿಗೂ ಅವರ ಮನೇಲಿ ಊಟ ಮಾಡಬಾರ್ದು ಅಂತ ಮಾಡಿಬಿಟ್ಟೇನಿ ಎಂದು ಹೇಳುತ್ತಿದ್ದ ಕಾಡ ಅಪ್ಪರಲ್ಲಿ ಅವಳ ಅವ್ವ ದೊಡ್ಡಮ್ಮ ಹೆಗ್ಗಡಿತಿಯವರು ಸಾಕು ಬಿಡೋ ಮತ್ತೇನು ಬಿರಾಂಬ್ರ ಮನೇಲಿ ಗೌಡರ್ನ ಒಳಗೆ ಕೂರ್ಸಿ ಇಕ್ತಾರೆ ಅಂತ ಮಾಡಿಯೇನು ? ನಮ್ಮನೇಲಿ, ಆ ಕಿಲಸ್ತರ ಉಪದೇಶಿ ಬರ್‍ತಾನಲ್ಲಾ ಅವನ್ನ ಒಳಗೆ ಕೂರ್ಸಿ ಊಟ ಹಾಕ್ತೀವೇನು ? ಹಂಗೇನ್ ಬಿರಾಂಬರ ಮನೇಲಿ ನಮ್ಮನ್ನೆಲ್ಲ ಹೊರಗೆ ಕೂರಿಸಿ ಇಕ್ತಾರೆ ಎಂದು ಬ್ರಾಹ್ಮಣ ಸಮರ್ಥನೆ ಮಾಡಿದರು.''[೧]

ಹೀಗೆ ಜೀವನ ಕ್ರಮಗಳಲ್ಲಿನ ಭಿನ್ನತೆ, ವೈವಿಧ್ಯಗಳು ಸಾಮಾಜಿಕ, ಸಾಂಸ್ಕೃತಿಕ ಶ್ರೇಣೀಕರಣಗಳ ವಿಕಾರ ರೂಪಗಳನ್ನು ಪಡೆದುಕೊಂಡು ಬಿಡುವುದು ಜಾತಿಪದ್ಧತಿಯ ಒಂದು ದೊಡ್ಡ ದುರಂತ. ಈ ಶ್ರೇಣೀಕರಣದಲ್ಲಿ ಮೇಲು-ಕೀಳು ಎಂಬ ಎರಡೇ ಘಟಕಗಳು ಇಲ್ಲದಿರುವುದು. ಪ್ರತಿ ಜಾತಿಯ ಸಂದರ್ಭದಲ್ಲೂ ಅದಕ್ಕೆ ಮೇಲಿನ ಜಾತಿ ಕೆಳಗಿನ ಜಾತಿ ಇದ್ದೇ ಇರುತ್ತದೆ. ಹಾಗಾಗಿ ಶೋಷಣೆಯ

---

೧. ಮಲೆಗಳಲ್ಲಿ ಮದುಮಗಳು – ಕುವೆಂಪು, ಪುಟ ೪೪೧-೪೪೨

ಅರಿವು ಮೂಡಿದಾಗಲೂ ನಮ್ಮನ್ನು ಬೇರೆಯವರು ಶೋಷಿಸುತ್ತಾ ಇದ್ದಾರೆ ಎಂಬ ಪ್ರಜ್ಞೆ ಮೂಡುವಷ್ಟು ಸುಲಭವಾಗಿ ನಾವೂ ಇತರ ಅನೇಕರನ್ನು ಶೋಷಿಸುತ್ತಿದ್ದೇವೆ ಎಂಬ ತಿಳುವಳಿಕೆ ಮೂಡುವುದಿಲ್ಲ.

ಕುವೆಂಪು ಕಾದಂಬರಿಗಳಲ್ಲಿ ಒಕ್ಕಲಿಗ ಪಾತ್ರಗಳಿಗೆ ತಾವು ಬ್ರಾಹ್ಮಣರಿಂದ ಶೋಷಣೆಗೆ ಅವಮಾನಕ್ಕೆ ಒಳಗಾಗಿರುವುದು ಅರಿವಿಗೆ ಬಂದಷ್ಟು ತಾವು ತಮಗಿಂತ ಕೀಳು ಎನ್ನಲಾದ ಜಾತಿಗಳವರನ್ನು ದಲಿತರನ್ನು ಹಾಗೆಯೇ ನಡೆಸಿಕೊಳ್ಳುತ್ತಿರುವ ಬಗ್ಗೆ ತಿಳುವಳಿಕೆ ಹುಟ್ಟುವುದಿಲ್ಲ. ಇದು ಕಾನೂರು ಹೆಗ್ಗಡಿತಿ ಹೂವಯ್ಯ ಚಿನ್ನಯ್ಯರ ಮಟ್ಟಿಗೆ ಎಷ್ಟು ನಿಜವೋ ಮಲೆಗಳಲ್ಲಿ ಮದುಮಗಳು ಕಾದಂಬರಿಯ ಮುಕುಂದಯ್ಯ, ದೇವಯ್ಯರ ಮಟ್ಟಿಗೂ ನಿಜ.

ಬ್ರಾಹ್ಮಣರ ಜತೆ ಸಹಪಂಕ್ತಿ ಇಲ್ಲ ನಿಜ. ಆದರೆ ದಲಿತರ ಜತೆ ಕೂಡ ಇವರಿಗೆ ಸಹಪಂಕ್ತಿ ಇಲ್ಲ. ಯಾವ ಜಾತಿಗಳವರಿಗೆ ಎಲ್ಲೆಲ್ಲಿ ಪ್ರವೇಶವಿದೆ. ಯಾರು ಎಲ್ಲಿ ಕೂಡಬೇಕು ಎಲ್ಲಿ ನಿಲ್ಲಬೇಕು ಎಲ್ಲಿ ಊಟ ಮಾಡಬೇಕು ಎಲ್ಲಿ ಮಲಗಬೇಕು ಯಾರು ಯಾರನ್ನು ಎಷ್ಟು ಮುಟ್ಟಿಸಿಕೊಳ್ಳಬಹುದು ಮುಂತಾದ ಜಾತಿ ಸೂಕ್ಷ್ಮಗಳನ್ನು ಕುವೆಂಪು ಕಾದಂಬರಿಗಳು ದಟ್ಟವಾಗಿ ಚಿತ್ರಿಸಿದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಯಾವುದನ್ನು ವೈಭವೀಕರಿಸಲು, ಆದರ್ಶೀಕರಿಸಲು ಹೊರಟಿಲ್ಲ. ಬದಲಾಗಿ ಸಾಧ್ಯವಾದಷ್ಟೂ ಬಹುಕೋನಗಳಲ್ಲಿ ಬಹುದೃಷ್ಟಿ –ಧ್ವನಿಗಳಲ್ಲಿ ಜಾತಿ ವ್ಯವಸ್ಥೆಯನ್ನು ಚಿತ್ರಿಸುವ ಮಹತ್ವಾಕಾಂಕ್ಷೆ ಇಲ್ಲಿ ಕಾಣಿಸುತ್ತದೆ. ಜಾತಿ ವ್ಯವಸ್ಥೆಯ ಇಕ್ಕಟ್ಟುಗಳನ್ನು ಕಾದಂಬರಿ ಕೇವಲ ಒಕ್ಕಲಿಗ ಪಾತ್ರಗಳ ದೃಷ್ಟಿಕೋನದಿಂದ ನೋಡಿಲ್ಲ.

ಜಾತಿ ಬೇಧದೊಂದಿಗೆ ವರ್ಗಬೇಧವೂ ಏಕಕಾಲದಲ್ಲಿ ಬಂದಾಗ ಒಂದು ಸಾಮಾಜಿಕ ವ್ಯವಸ್ಥೆ ಹೆಚ್ಚು ಹೆಚ್ಚು ಕ್ರೂರವೂ ಅಮಾನವೀಯವೂ ಆಗಿಬಿಡುತ್ತದೆ. ಲಿಂಗಬೇಧ ಮತ್ತು ಲೈಂಗಿಕ ಶೋಷಣೆಗಳೂ ಸೇರಿಬಿಟ್ಟರೆ ದಮನಕ್ಕೆ ಒಳಗಾದವರ ಬಾಳು ಅಸಹನೀಯವಾಗಿ ಬಿಡುತ್ತದೆ. ಜೀತಪದ್ಧತಿಯ ವಿರಾಟ್ ದರ್ಶನವೇ ಕಾದಂಬರಿಗಳಲ್ಲಿ ಸಿಗುತ್ತವೆ.

''ದೊಡ್ಡಬೀರನಿಗೆ ತನ್ನ ಮಗಳನ್ನು ತನಗೆ ಇಚ್ಛೆ ಬಂದ ವರನೊಂದಿಗೆ ಮದುವೆ ಮಾಡಿಕೊಡುವ ಸ್ವತಂತ್ರವಿಲ್ಲ, ತಿಮ್ಮಿಗೆ ತಾನು ಒಲಿದ ಗಂಡನ್ನು ಮದುವೆಯಾಗುವ ಸ್ವಾತಂತ್ರ್ಯವಿಲ್ಲ. ಏಕೆಂದರೆ ಗೌಡರ ಜೀತದಾಳಾಗಿ, ಅವರಲ್ಲಿ ಸಾಲ ಮಾಡಿ, ಅವರಿಗೆ ತನ್ನನ್ನು ಸಂಪೂರ್ಣವಾಗಿ ಮಾರಿಕೊಂಡಿದ್ದ ದೊಡ್ಡಬೀರ. ಆ ವಿಚಾರದಲ್ಲಿ ನಿರುಪಾಯನಾಗಿ ಒಡೆಯರ ಆಜ್ಞೆಗೆ ತಲೆ ಬಾಗಿದ್ದನು. ಒಡೆಯರಿಗೆ ಬೇಕಾಗಿದ್ದುದು ಜೀತ ಮಾಡಲು ಒಂದು ಆಳು. ತಮ್ಮ ಹೊಲೆಗೇರಿಯ ಒಂದು ಹೆಣ್ಣನ್ನು ಹೊರಗೆ ಕೊಟ್ಟರೆ ತಮ್ಮ ಕೆಲಸಕ್ಕೆ ಬಂದಾಳು ಖೋತಾ ಬೀಳುತ್ತದೆ. ಆದ್ದರಿಂದ ಕೇರಿಯ ಹೆಣ್ಣನ್ನು ಕೇರಿಯ ಗಂಡೇ ಮದುವೆಯಾಗಬೇಕು... ಒಲವು ಅಕ್ಕರೆ ಏನಿದ್ದರೂ ಒಡೆಯರ ಲಾಭದ ವಲಯದೊಳಗೆ ಅವರ ಆಜ್ಞೆಯ ಗೆರೆ ದಾಟುವಂತಿರಲಿಲ್ಲ''[೧]

---

೧. ಮಲೆಗಳಲ್ಲಿ ಮದುಮಗಳು – ಕುವೆಂಪು, ಪುಟ ೧೭೦

ಪ್ರತಿಯೊಂದು ಘಟನೆಯೂ ಇಲ್ಲಿ ವರ್ಗ ಸಂಬಂಧಗಳ ಹಿನ್ನೆಲೆಯಲ್ಲಿಯೇ ನಡೆಯುತ್ತವೆ. ಜಮೀನುದಾರ ವರ್ಗದ ವಿವಿಧ ರೀತಿಯ ಹಿಂಸೆಗಳೆ ಇಲ್ಲಿಯ ಮುಖ್ಯ ಘಟನೆಗಳಿಗೆ ಕಾರಣ. ಮಲೆಗಳಲ್ಲಿ ಮದುಮಗಳು ಕೃತಿಯಲ್ಲಿ ಕಂಡುಬರುವ ಸಮಾಜ ತನ್ನ ಪರಿಸರಕ್ಕೆ ತಕ್ಕಂತೆ ಹೊಂದಿಕೊಂಡು ನಂಬಿಕೊಂಡು ಬಂದ ನಂಬಿಕೆ ಪದ್ಧತಿಗಳನ್ನ ನೆಚ್ಚಿಕೊಂಡಿರುವಂತಹದು. ಆದರೆ ಈ ಸಮಾಜ ಹೊರಗಿನ ಪ್ರಭಾವಕ್ಕೆ ಮಣಿಯದೆ ಇರಲಾರದು. ಅನ್ಯಮತ-ಅನ್ಯನಾಗರಿಕತೆ ತನ್ನ ಪರಿಸರದಲ್ಲಿ ನುಸುಳಿ ಬಂದಾಗ ಈ ಸಮಾಜದಲ್ಲಿ ಮಿಶ್ರ ಪ್ರತಿಕ್ರಿಯೆಯಾಗುತ್ತದೆ. ಆದರೆ ತನ್ನ ಸಂಸ್ಕೃತಿಯ ಸತ್ವವನ್ನು ಬಲಪಡಿಸಿಕೊಳ್ಳುವುದರಲ್ಲಿಯೇ ಈ ಸಮಾಜ ಸಾರ್ಥಕತೆಯನ್ನು ಕಾಣುತ್ತದೆಯೇ ಹೊರತು ಪರಕೀಯತೆಯಲ್ಲ.

ಕಾದಂಬರಿಗಳಲ್ಲಿ ಬರುವ ಸಂಘರ್ಷದ ಸ್ವರೂಪ ಏಕಸ್ತರವಾಗಲ್ಲ. ಈ ಸ್ತರಗಳು ಈ ರೀತಿ ಇವೆ.

1) ಧಾರ್ಮಿಕ ಸಂಘರ್ಷ ಶೋಷಣೆ
2) ಮತದ ಹೆಸರಿನಲ್ಲಿ ಶೋಷಣೆ
3) ಜಾತಿಯ ಹೆಸರಿನಲ್ಲಿ ಶೋಷಣೆ
4) ವರ್ಗದ ಹೆಸರಿನಲ್ಲಿ ಶೋಷಣೆ

ಈ ನಾಲ್ಕು ಬಗೆಯ ಸಂಘರ್ಷಗಳು ಬ್ರಾಹ್ಮಣರ ಮನೆಗಳಲ್ಲೂ ಇರುತ್ತದೆ. ಶ್ರೀಮಂತ ವರ್ಗದಲ್ಲೂ ಕೆಳವರ್ಗದಲ್ಲೂ ಈ ಸಂಘರ್ಷಗಳು ಹೇಗೆ ಬರುತ್ತವೆ. ಮೇಲ್ ವರ್ಗದವರು ಕೆಳವರ್ಗದವರನ್ನು ಶೋಷಿಸಿದರೆ ಕೆಳವರ್ಗದವರು ತಮಗಿಂತ ಕೆಳವರ್ಗದವರನ್ನು ಶೋಷಿಸುತ್ತಾರೆ. ಕುವೆಂಪು ಒಕ್ಕಲು ಶೂದ್ರ ವರ್ಗಕ್ಕೆ ಸೇರಿದ್ದರೂ ಅವರು ಸಮಾಜದ ದೋಷ, ದೌರ್ಬಲ್ಯ, ವಿಚಿತ್ರ ನಡವಳಿಕೆಯನ್ನು ಚಿತ್ರಿಸಿರುವುದನ್ನು ಕಾಣಬಹುದು.

ಕಾನೂರು ಹೆಗ್ಗಡಿತಿ ಬೇರೆ ಕುಟುಂಬಗಳ ಹಿನ್ನೆಲೆಯಲ್ಲಿ ಸಾಗುತ್ತದೆ. ಹಲವು ದುರಂತಗಳಿಗೆ ಕುಟುಂಬ ಕಾರಣ. ಮಲೆಗಳಲ್ಲಿ ಮದುಮಗಳು ಇತರ ವ್ಯವಸ್ಥೆಗಳಲ್ಲಿ ಒಂದಾಗಿ ಸಮಾಜ ಕುಟುಂಬ ಎಲ್ಲಾ ಸಾಮಾಜಿಕ ನಿರ್ಬಂಧಗಳನ್ನು ನೀಡಿದಂತಹ ಮನುಷ್ಯನ ಅತಿಮಾನುಷಗಳನ್ನು ತರುತ್ತಾರೆ. ಹಿಂದೂ, ಮುಸ್ಲಿಂ, ಕ್ರೈಸ್ತ ಮತವನ್ನು ಮೀರಿದ ಆಧ್ಯಾತ್ಮವಿದೆ.

ಅಶಾಂತಿಯ ಮೌನ ಸಂಘರ್ಷದ ಜ್ವಾಲಾಮುಖಿಗಳು ಕಾದಂಬರಿಯ ಮುಖ್ಯ ಸತ್ವ. ಪ್ರತಿಯೊಂದು ಘಟನೆಯೂ ಇಲ್ಲಿ ವರ್ಗ ಸಂಬಂಧಗಳ ಹಿನ್ನೆಲೆಯಲ್ಲಿಯೇ ನಡೆಯುತ್ತದೆ. ಜಮೀನುದಾರ ವರ್ಗದ ವಿವಿಧ ರೀತಿಯ ಹಿಂಸೆಗಳೆ ಇಲ್ಲಿಯ ಮುಖ್ಯ ಘಟನೆಗಳಿಗೆ ಕಾರಣ. ಎಲ್ಲಕ್ಕಿಂತ ಹೆಚ್ಚಾಗಿ ಇಲ್ಲಿ ಲುಂಗಿಸಾಬಿ, ಇಜಾರಸಾಬಿ, ಅಜ್ಜೀಸಾಬಿ ಮೊದಲಾದ ಭೂಮಾಲೀಕ ವರ್ಗದ- ಗೂಂಡಾ ಪಡೆಯೂ ಇದ್ದು ಇದರ ವಿರುದ್ಧ ಜೀತದವರ ಒಕ್ಕಲುಗಳ ಕೆಳಜಾತಿಯವರ ಉಗ್ರ ಪ್ರತಿಭಟನೆಯೂ ಇದೆ. ಗುತ್ತಿಯ ಸಾಬಿಯೊಬ್ಬನ ಮೇಲೆ ಹಲ್ಲೆ ಮಾಡಿ ಪೊಲೀಸರಿಂದ ತಪ್ಪಿಸಿಕೊಂಡ ಘಟನೆ ಇದಕ್ಕೆ ಸಾಕ್ಷಿ. ಅಷ್ಟೇ ಅಲ್ಲದೆ ಜಾತಿಪದ್ಧತಿಯ ತೆಕ್ಕೆಯಿಂದ ಬಿಡಿಸಿಕೊಳ್ಳಲು ಬ್ರಾಹ್ಮಣೇತರ ಜಾತಿಗಳು ನಡೆಸುತ್ತಿದ್ದ ಪ್ರಯತ್ನದ ಚಿತ್ರಣವೂ ಇಲ್ಲಿ ಇದೆ.

ಮಲೆಗಳಲ್ಲಿ ಮದುಮಗಳು ಊಳಿಗಮಾನ್ಯ ವ್ಯವಸ್ಥೆಯೊಳಗಿನ ವರ್ಗ ಹಿಂಸೆಯ ಹೃದಯ ವಿದ್ರಾವಕ ಕಥನ ಮಲೆನಾಡಿನ ಜೀವನವನ್ನು ವರ್ಗ ಸಂಬಂಧಗಳನ್ನು ಕುರಿತ ಹೊಸದರ್ಶನವನ್ನು ಕುವೆಂಪುರವರು ಸಾಧಿಸಿದ್ದಾರೆ. ಕುವೆಂಪು ಕಾದಂಬರಿಗಳ ಸಮಾಜದಲ್ಲಿ ನಾಲ್ಕು ಜಾತಿಗಳು ಪ್ರಮುಖವಾಗಿ ಬರುತ್ತವೆ. ಬ್ರಾಹ್ಮಣರು, ಗೌಡರು, ಒಕ್ಕಲಿಗರು, ಮುಸ್ಲಿಂ, ಕ್ರಿಶ್ಚಿಯನ್ನರು.

ಬ್ರಾಹ್ಮಣರು ದುಡಿಯುವರಲ್ಲಿ ವೇದಶಾಸ್ತ್ರ ಪುರಾಣಗಳೆ ಬಂಡವಾಳ ಅಗ್ರಹಾರದ ಭೋಜನ ಶೂದ್ರರ ಪಾಲಿಗೆ ಸ್ವರ್ಗ ಭೋಜನ ಇವರು ಜಾತಿ ಶ್ರೇಣಿಗಳ ತುತ್ತತುದಿಯಲ್ಲಿದ್ದಾರೆ. ಬೌದ್ಧಿಕವಾಗಿ ಎಲ್ಲರ ಮೇಲೂ ಅವರ ಹಿಡಿತವಿದೆ. ವೇದ ಪುರಾಣಗಳನ್ನು ಪ್ರಶ್ನಿಸುವ ಹೂವಯ್ಯ – ದೇವಯ್ಯನಂಥವರನ್ನು ಅವರು ಸಹಿಸರು. ತಮ್ಮ ವರ್ಗ ಹಿತಾಸಕ್ತಿ ಕಾಪಾಡಿಕೊಳ್ಳಲು ಎಂಥ ನೀಚ ಕೆಲಸಕ್ಕೂ ಇಳಿಯಬಲ್ಲವರು.

ಒಕ್ಕಲಿಗರು ಅಥವಾ ಗೌಡರು ಭೂಮಾಲೀಕರು ತಮ್ಮನ್ನು ಬಿಟ್ಟು ಅನ್ಯರು ಭೂಮಾಲೀಕರಾಗಕೂಡದೆಂದು ಇವರ ತಗಾದೆ. ಬ್ರಾಹ್ಮಣರು ಬೌದ್ಧಿಕ ಶೋಷಣೆಯ ಒಂದು ಮುಖವಾದರೆ ಗೌಡರು ಅಥವಾ ಒಕ್ಕಲಿಗರು ಆರ್ಥಿಕ ಶೋಷಣೆಯ ಇನ್ನೊಂದು ಮುಖವಾಗಿದ್ದಾರೆ. ಜೀತದಾಳು ಅಥವಾ ಕೂಲಿಯಾಳುಗಳು ಇವರ ಇಚ್ಛೆಗೆ ವಿರೋಧವಾಗಿ ನಡೆದರೆ ಮುಸ್ಲಿಮರನ್ನು ಬಳಸಿಕೊಂಡು ಹೊನ್ನಾಳಿ ಹೊಡೆತದ ಮೂಲಕ ತಾವು ಹೇಳಿದ ಹಾಗೆ ಕೇಳುವಂತೆ ಮಾಡಿಕೊಳ್ಳುತ್ತಿದ್ದರು. ಗೌಡರು ಆಸ್ತಿಯನ್ನು ಪಾಲು ಮಾಡಿಕೊಳ್ಳುವಂತೆ ಜೀತದಾಳುಗಳನ್ನ ಪಾಲು ಮಾಡಿಕೊಳ್ಳುತ್ತಿದ್ದರು.

ಮುಸ್ಲಿಮರಾದರೋ ಅಧಿಕಾರ ಕಳೆದುಕೊಂಡು ಹಲ್ಲಿಲ್ಲದ ಹಾವಿನಂತಾಗಿದ್ದಾರೆ. ವ್ಯಾಪಾರ, ಕಳ್ಳತನ, ದರೋಡೆಗಳಲ್ಲಿ ತೊಡಗಿರುವ ಇವರು ಹೊನ್ನಾಳಿ ಹೊಡತಕ್ಕೆ ಪ್ರಸಿದ್ಧರಾಗಿದ್ದಾರೆ. ಆದ್ದರಿಂದ ಇವರನ್ನು ಕಂಡರೆ ಎಲ್ಲರಿಗೂ ಭಯ. ಹಣಕ್ಕಾಗಿ ಏನುಬೇಕಾದರೂ ಮಾಡಲು ಸಿದ್ಧರು. ಸಮಗ್ರ ಭಾರತದ ರಾಜ್ಯಭಾರ ಮಾಡಿದ ಬ್ರಿಟಿಷರು ತಮ್ಮ ಅಧಿಕಾರ ಬಲದಿಂದ ಕ್ರಿಸ್ತೀಯ ಧರ್ಮ ವಿಸ್ತರಣೆಯಲ್ಲಿ ತೊಡಗಿದ್ದಾರೆ. ಉತ್ತಮ ಜಾತಿಯ ಗೌಡನೊಬ್ಬನನ್ನು ಮತಾಂತರಗೊಳಿಸಿದರೆ ಉಳಿದವರನ್ನು ಮತಾಂತರಗೊಳಿಸುವುದು ಸುಲಭ. ಅದಕ್ಕಾಗಿ ಅವರು ಹೆಣ್ಣುಗಳ ಆಮಿಷ, ಸ್ಕೂಲು, ಆಸ್ಪತ್ರೆ ತೆರೆಯುವ ಭರಾಟೆಯಲ್ಲಿದ್ದಾರೆ. ಕ್ರೈಸ್ತರ ಆಗಮನದೊಂದಿಗೆ ಬೈಸಿಕಲ್, ಕಾಫಿ, ಔಷಧಿಗಳು ಮಲೆನಾಡಿನ ಒಡಲಿನಲ್ಲಿ ಹೊಸಗಾಳಿಯನ್ನು ಬೀಸುತ್ತವೆ.

ದೇವಯ್ಯನಂಥ ಗೌಡನೂ ಕ್ರಾಪು ಬಿಟ್ಟು ಸೈಕಲ್ಲು ಹತ್ತಿ ಕಾಫಿ ಕುಡಿಯತೊಡಗಿದ್ದಾನೆ. ಇವರು ಹಿಂದೂ ಧರ್ಮದ ಜಾತಿ ವ್ಯವಸ್ಥೆಯನ್ನು ಮೂಢ ಸಂಪ್ರದಾಯಗಳನ್ನು ತೆಗಳುವುದರ ಜೊತೆಗೆ ಅಸ್ಪೃಶ್ಯನಾದ ಬಚ್ಚನನ್ನು ಮತಾಂತರಗೊಳಿಸಿ ''ನೀನಿನ್ನು ಹೊಲೇರವ ಅಲ್ಲ, ಬರಾಂಬ್ರ ಮನೆಗಾಗ್ಲಿ ಗೌಡರ ಮನಿಗಾಗ್ಲಿ ಹೋದ್ರೆ ಅಂಗಳದಾಗೆ ನಿಂತ್ಗೊಬ್ಯಾಡ ಜಗಲೀಗೆ ಹೋಗಿ ಕೂತ್ಗ ಎಂದು ಧೈರ್ಯ ತುಂಬುತ್ತಿದ್ದಾರೆ. ಒಟ್ಟಿನಲ್ಲಿ ಕ್ರಿಶ್ಚಿಯನ್ ವಿದ್ಯಾಭ್ಯಾಸ ಕ್ರಮದಿಂದ ತಮ್ಮ ಉದ್ಧಾರದ ಬೆಳಕನ್ನು ಕಂಡುಕೊಳ್ಳತೊಡಗಿದರು ಎಂಬ ಮಾತು ನಿರ್ವಿವಾದವಾಗಿದೆ.

ದಲಿತ ಪಾತ್ರಗಳು ಕೇವಲ ಹೆಂಡ ಮಾಂಸ ಕಾಮ ಇತ್ಯಾದಿ ಮಣ್ಣಿನ ಸ್ಥಿರದಲ್ಲಿಯೆ ಬದುಕಿ ಪ್ರತಿಭಟಿಸಿದೆ. ಘರ್ಷಿಸಿದೆ. ಕುವೆಂಪು ಒಡೇರ ದಿಣ್ಣೆ ಮೇಲೆ ನಿಂತು ದಲಿತರ ಬದುಕನ್ನು ನೋಡಲು ಸಾಧ್ಯವೆ ಹೊರತು ಹೊಲೆಯರ ಗುಡಿಸಲಿನಲ್ಲಿ ಕುಳಿತು ನೋಡಲಾರರು. ಶೋಷಣೆಯನ್ನು ಕುರಿತು ಬರೆಯುವ ಲೇಖಕರಿಗೆ ಶೋಷಣಾ ವ್ಯವಸ್ಥೆಯ ಬಗ್ಗೆ ಸ್ಪಷ್ಟ ಕಲ್ಪನೆಯೂ ನಿಚ್ಚಳ ಧೋರಣೆಯೂ ಇರಬೇಕಾದುದು ಅವಶ್ಯಕ. ಆದರೆ ಲೇಖಕರಿಗೆ ಅಂಥ ಧೋರಣೆ ಇಲ್ಲದೆ ಹೋದಾಗ ಅಥವಾ ಒಂದು ಮಟ್ಟದ ಶೋಷಣೆಯನ್ನು ಪ್ರತಿಭಟಿಸುವ ಲೇಖಕ ಮತ್ತೊಂದು ಮಟ್ಟದ ಶೋಷಣೆಯನ್ನು ವಿರೋಧಿಸದೆ ಹೋದಾಗ ಸ್ವಜನ ಪಕ್ಷಪಾತಿಯೂ ವರ್ಗ ಹಿತಾಸಕ್ತನೂ ಆಗುತ್ತಾನೆ. ಕುವೆಂಪು ದಲಿತ ಜೀವ ಚಿತ್ರಣ ಮಾಡುವಾಗ ಇಂಥ ಸಂದಿಗ್ಧತೆಯ ಆರೋಪದಿಂದ ಮುಕ್ತವಾಗಿಲ್ಲ ಎನ್ನುವುದಕ್ಕೆ ಕೆಲವು ಉದಾಹರಣೆ :–

ಕಾನೂರು ಹೆಗ್ಗಡಿತಿಯ ಓಬಯ್ಯ ಹರಕೆ ಒಪ್ಪಿಸಲು ಅಗ್ರಹಾರಕ್ಕೆ ಹೋಗಿ ಜೋಯಿಸರನ್ನು ಕಾಣದೆ ಬಳಲಿದ್ದ ಅವನಿಗೆ ನೀರಡಿಕೆಯಾಗಿತ್ತು ಒಂದು ತಂಬಿಗೆ ನೀರನ್ನು ಬಾಳೆ ಕೀತನಲ್ಲಿ ಒಂದಷ್ಟು ಜೊತೆ ಬೆಲ್ಲವನ್ನು ತಂದಿಡುತ್ತ ಮೈಲಿಗೆಯ ಭೀತಿಯಿಂದ ದೂರ ನಿಂತು ಬ್ರಾಹ್ಮಣ ಹುಡುಗನೊಬ್ಬ ಓಬಯ್ಯನಿಗೆ ''ಕಚ್ಚಿ ಕುಡಿಯ ಬೇಡವೋ ಎತ್ತಿ ಕುಡಿ'' ಎಂದ.

ಓಬಯ್ಯ ಎತ್ತಿಕುಡಿಯಲು ಬಾರದೆ ಮುಖದ ಮೇಲೆಲ್ಲ ನೀರು ಬಿದ್ದು ಅವಾಂತರವಾಯಿತು. ಅದನ್ನು ಕಂಡು ಬ್ರಾಹ್ಮಣ ಹುಡುಗರು ಜಿಗುಪ್ಸೆ ತಾಳಿದರು. ಆ ಬ್ರಾಹ್ಮಣ ಹುಡುಗರಿಗೆ ಹಿರಿಯರು ಕಲಿಸಿದ್ದ ತಿರಸ್ಕಾರ ಮತ್ತೆನಿತು ಹೆಚ್ಚಾಯಿತು ಎಂದು ಬರೆಯುವ ಕುವೆಂಪು ಅವರು ಚಂದ್ರೇಗೌಡರ ಹಿರಿಯ ಮಗ ವಾಸು ಹೊಲೆಯರ ಭೈರನ ಮಗ ಮಾಂಸದ ಆಸೆಗಾಗಿ ಹಕ್ಕಿಯ ಮರಿಗಳನ್ನು ಕದ್ದನೆಂದು ಕೋಪದಿಂದ ಬೆಲರವನನ್ನು ಮುಟ್ಟಬಾರದೆಂದು ಗೊತ್ತಿದ್ದರೂ ಒನಕೆಯಿಂದ ಹಿಟ್ಟು ಕುಟ್ಟುವಂತೆ ಗಂಗನ ಮೈಗೆ ಗುದ್ದಿ ತನ್ನ ಜೇಬಿನಲ್ಲಿದ್ದ ಹಕ್ಕಿಯನ್ನು ಬಿಸಾಡಿ, ದಾರಿಯಲ್ಲಿ ಬೇಲರವನನ್ನು ಮುಟ್ಟಿದ್ದಕ್ಕೆ ಪ್ರಾಯಶ್ಚಿತ್ತವಾಗಿ ಹಟ್ಟಿಗೆ ಹೋಗಿ ಸೆಗಣಿಯನ್ನ ಮುಟ್ಟಿ ಹಿತ್ತಲ ಕಡೆಯ ಬಾಗಿಲಿನಿಂದ ಮನೆಯನ್ನು ಪ್ರವೇಶಿಸಿದನು ಎಂದಾಗ ಯಾವ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವುದಿಲ್ಲ

ಭೂಮಾಲೀಕರ ಕ್ರೌರ್ಯ ಮತ್ತು ದುಡಿವ ವರ್ಗದ ದಯನೀಯ ಸ್ಥಿತಿಯ ಚಿತ್ರಣದಲ್ಲಿ ಲೇಖಕನ ಸಂಯಮವು, ಆ ಕ್ರೌರ್ಯದ ತೀವ್ರತೆಯನ್ನು ಹೆಚ್ಚಿಸಿಬಿಟ್ಟಿದೆ. ಯಾರೋ ನೇಗಿಲು ಮುರಿದುದಕ್ಕೆ ಬೇಲರ ಸಿದ್ದನಿಗೆ ಸಿಗುವ ಶಿಕ್ಷೆ, ಸಣ್ಣಬೀರನಿಗೆ ಬೀಳುವ ಹೊನ್ನಾಳಿ ಹೊಡ್ತ-ಇವೆಲ್ಲ ಊಳಿಗಮಾನ್ಯ ವ್ಯವಸ್ಥೆಯ ಬರ್ಬರತೆಗೆ ನಿದರ್ಶನಗಳಂತಿದೆ ; ಜೀತದಾಳು ಹೊಲೆಯನೊಬ್ಬನ ಎದೆಮೇಲೆ ಹಲಗೆ ಹಾಕಿ ಮೆಟ್ಟಿಸಿ, ಅವನು ರಕ್ತಕಾರಿ ಸತ್ತದ್ದರ ಉಲ್ಲೇಖವೂ ಒಂದು ಕಡೆ ಬರುತ್ತದೆ. ಜೀತದಾಳು ದೇಯಿಯ ಸಾವನ್ನು ಧಣಿಗಳಾದ ರಂಗಪ್ಪಗೌಡರು ತಣ್ಣಗೆ ಸ್ವೀಕರಿಸುವ ರೀತಿಯಂತೂ ಭಯಾನಕವಾಗಿದೆ. ತಮ್ಮ ಜಾತಿಯವೇ ಆದ ಅಣ್ಣಯ್ಯಗೌಡರನ್ನು ಚಂದ್ರಯ್ಯಗೌಡರೂ ಮೇಗರಹಳ್ಳಿಯ ಹೆಗ್ಗಡೆಯವರೂ ಹೊಸಕಿ ಹಾಕುವುದು ಬೀಭತ್ಸವನ್ನು ಮೀರಿಸುತ್ತದೆ.

ಹೆಗ್ಗಡಿತಿಯಿಂದ ಹೊಲೆಯಾಳಿನವರೆಗೆ ಬರುವ ಇಲ್ಲಿನ ಹೆಣ್ಣುಗಳು ಒಂದೊಂದು ದುರಂತ ಕಥೆಯಾಗುತ್ತವೆ. ನಾಗಕ್ಕನನ್ನ ಮಾರಾಟಕ್ಕಾಗಿ ದನದಂತೆ ಸಾಗಿಸಲಾಗುತ್ತದೆ. ಇಲ್ಲಿ ಹೆಣ್ಣು ಕೇವಲ ಅದು ''ಹಾಗೆ ಕರೆಯುತ್ತಿದ್ದುದರಲ್ಲಿ ಯಾವ ಬುದ್ಧಿಪೂರ್ವಕವಾದ ಇಲ್ಲವೆ ವೈಯಕ್ತಿಕವಾದ ತಿರಸ್ಕಾರ ಭಾವವೂ ಇರುತ್ತಿರಲಿಲ್ಲ ಆದರೆ ಅದು ಸಾಮಾಜಿಕವಾದ ಸಮಷ್ಟಿರೂಪದ ಒಂದು ಕೀಳು ಭಾವನೆಯನ್ನು ಪ್ರತಿಬಿಂಬಿಸುತ್ತಿತ್ತು''[೧] ಎಂದು ಕಾದಂಬರಿಕಾರ ವಿಶ್ಲೇಷಿಸುತ್ತಾರೆ.

ಸುಬ್ಬಮ್ಮನಿಗೆ ಚಂದ್ರಯ್ಯಗೌಡರು ನೀಡುವ ಶಿಕ್ಷೆಯು ಅತ್ಯಂತ ಅಮಾನುಷ ತೆರನಾದದ್ದಾಗಿದೆ. ಪುರುಷ ಬಲಾತ್ಕಾರಗಳಿಗೆ ಬಲಿಯಾಗುವ ಮುಗ್ಧರು, ತಮ್ಮ ತಂದೆಯ ಬಡ್ತಿಗಾಗಿ ತಮ್ಮ ದೇಹವನ್ನು ಒತ್ತೆಯಿಡುವ ಮಕ್ಕಳು ಒಡೆಯರ ಜೊತೆ ಮಲಗುವ ಜೀತದವರು, ಬಡತನದ ಬೇಗೆಯಿಂದ ಪಾರಾಗಲು ಶ್ರೀಮಂತ ಮುದುಕರನ್ನು ಕೈಹಿಡಿಯುವ ಹೆಣ್ಣುಗಳು ಯಾರನ್ನೋ ಬಯಸಿ ಯಾರನ್ನೋ ಮದುವೆಯಾಗುವವರು. ಭೂಮಾಲೀಕ ಹಿತಗಳಿಗಾಗಿ ತಮ್ಮ ಪ್ರೇಮಿಗಳನ್ನು ಕಳೆದುಕೊಂಡು ಪಾಡು ಪಡುವವರು ಹೀಗೆ ಬದುಕನ್ನು ಜೀವಂತಗೊಳಿಸುವ ಈ ಚೈತನ್ಯಶಕ್ತಿಗಳು ನಿಕೃಷ್ಟವಾದ ಸಾಮಾಜಿಕ ಧೋರಣೆಯಿಂದಾಗಿ ಪಡಬಾರದ ಪಾಡು ಪಡುತ್ತವೆ.

ಅನಿಷ್ಟ ಸಂಪ್ರದಾಯಗಳನ್ನು ಧಿಕ್ಕರಿಸಿ ತಮ್ಮದೇ ರೀತಿಯಲ್ಲಿ ಹೊರಬಂದು ಚರಿತ್ರೆಯನ್ನು ಸೃಷ್ಟಿಸುವ ಪಾತ್ರಗಳಂತೆ ಅಸ್ಪೃಶ್ಯ ಜಾತಿಗೆ ಸೇರಿದ ತಿಮ್ಮ, ಚಿನ್ನಮ್ಮ, ಸೀತೆ ಎಲ್ಲರೂ ಸ್ತ್ರೀ ಜಾತಿಯ ದಮನದ ವಿರುದ್ಧ ಪ್ರತಿಭಟಿಸಿ ಎದ್ದು ನಿಂತ ಕ್ರಾಂತಿಕಾರಿಗಳು ಅನಿಷ್ಟ ಸಂಪ್ರದಾಯವನ್ನು ಧಿಕ್ಕರಿಸಿದವರು. ತಮ್ಮಗೊಲ್ಲದ ಮದುವೆ ಏರ್ಪಾಡುಗಳನ್ನು ತಿರಸ್ಕರಿಸಿ ನಡುರಾತ್ರಿಯಲ್ಲಿ ತಾವು ಒಲಿದವರನ್ನು ಸೇರಲು ಹೊರಡುವ ನಾರಿಯರು, ಆಧುನಿಕ ಭಾರತದ ಸ್ತ್ರೀತ್ವಕ್ಕೆ ಸಂಕೇತವೆನಿಸುತ್ತಾರೆ.

ಸುಬ್ಬಮ್ಮ ಹೆಗ್ಗಡಿತಿಯಾಗಿ ಹೊರಹೊಮ್ಮುವುದು ಸ್ತ್ರೀಯರು ಕುಟುಂಬ ಮತ್ತು ಸಮಾಜದಲ್ಲಿ ಪಡೆಯುವ ಸ್ಥಾನಮಾನಕ್ಕೆ ಪ್ರತೀಕದಂತಿದೆ. ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಆಕೆ ದುಃಖದಾಯಕ ಅಂತ್ಯವನ್ನು ಕಂಡರೂ ಗ್ರಾಮೀಣ ಸಮಾಜವೊಂದು ಸೃಷ್ಟಿಸಬಲ್ಲ ಧೈರ್ಯಗಾರ್ತಿ ಹೆಣ್ಣುಸುಬ್ಬಮ್ಮ. ಮಲೆಗಳಲ್ಲಿ ಮದುಮಗಳು ಪ್ರಾರಂಭವಾಗುವುದೇ ಸಂಪ್ರದಾಯವನ್ನು ಧಿಕ್ಕರಿಸಿದ ಗುತ್ತಿತಿಮ್ಮಿಯನ್ನು ಹಾರಿಸಿಕೊಂಡು ಬರಲು ಹೊರಡುವುದರಿಂದ ಮತ್ತು ಅದು ಅಂತ್ಯವಾಗುವುದು ಸ್ತ್ರೀಯರಿಗಿರುವ ಅತ್ಯಲ್ಪ ಸ್ವಾತಂತ್ರದಿಂದ ಈ ಎರಡೂ ಕಾಳಜಿಗಳು ಸಮಕಾಲೀನ ಸಮಾಜ ಚಿಂತಕರ ಸುಧಾರಕರ ಕಾಳಜಿಗಳೂ ಆಗಿದ್ದವೆನ್ನುವುದು ಮುಖ್ಯ.

ಪುನರೋತ್ಥಾನ ಮನೋಧರ್ಮವು ನಾಡಿನ ವರ್ಗಸಂಘರ್ಷಗಳನ್ನು ಪರಿಸರವನ್ನು ಸರಿಯಾಗಿ ಗ್ರಹಿಸುವ ರೀತಿಯಲ್ಲಿ ಲೇಖಕನ ಪ್ರಜ್ಞೆಯನ್ನು ಕುಗ್ಗಿಸುತ್ತದೆಯೆಂದೂ ಕುವೆಂಪು ನಮ್ಮ ಸಾಮಾಜಿಕ ವ್ಯವಸ್ಥೆಯನ್ನು ವರ್ಣ ವ್ಯವಸ್ಥೆಯಲ್ಲಿ ವಿವರಿಸಿಕೊಂಡಿದ್ದಾರೆ. ದೇವಯ್ಯನ ಮತಾಂತರ ಪ್ರಸಂಗವು ಅಪರೋಕ್ಷವಾಗಿ ಪುರೋಹಿತಶಾಹಿಯ ದಬ್ಬಾಳಿಕೆಯತ್ತ ಬೆರಳು ಮಾಡುತ್ತ ಹೂವಯ್ಯನ ಆಧ್ಯಾತ್ಮಿಕ ಸಂಘರ್ಷಕ್ಕೆ ಮತ್ತೊಂದು ಸಮರ್ಥನೆಯ ರೂಪವಾಗಿದೆ.

---

೧. ಮಲೆಗಳಲ್ಲಿ ಮದುಮಗಳು – ಕುವೆಂಪು, ಪುಟ ೮೫

ವಸಾಹತೀಕರಣ ಪ್ರಕ್ರಿಯೆಯಲ್ಲಿ ತನ್ನ ಸಂದರ್ಭದಲ್ಲಿ ಕಾದಂಬರಿಯು ಮೂರು ಮುಖ್ಯ ನೆಲೆಗಳತ್ತ ಗಮನಹರಿಸಿದ ಹಾಗೆ ಕಾಣುತ್ತದೆ. ಮತಾಂತರ, ಆಧುನಿಕ ಶಿಕ್ಷಣ ಮತ್ತು ಆಧುನಿಕ ಜೀವನ ಕ್ರಮ, ಹೊಸ ಸ್ಕೂಲಿನ ಸ್ಥಾಪನೆ, ಬೈಸಿಕಲ್‌ನಂಥ ಯಂತ್ರಗಳ ಪರಿಚಯ ವೇಷಭೂಷಣಗಳ ಮಾರ್ಪಾಟು, ಸ್ಥಳೀಯ ಕಂದಾಚಾರ ವಿಧಿ ನಿಷೇಧಗಳಿಗೆ ಪರ್ಯಾಯವಾದ ಹೊಸ ಸಾಮಾಜಿಕ ರೂಢಿಗಳ ಆಗಮನ ಮುಂತಾದ ಅಂಶಗಳನ್ನು ಕಾದಂಬರಿ ತನ್ನ ಪಾತ್ರಗಳ-ದೈನಂದಿನ ಜೀವನ ಸಂದರ್ಭಗಳು ಸನ್ನಿವೇಶಗಳು ಸಂಭಾಷಣೆಗಳ ಮುಖಾಂತರವೇ ಪ್ರಸ್ತುತಪಡಿಸುತ್ತದೆ.

ಹಳೆಯ ವಿದ್ಯಾಭ್ಯಾಸ ಪದ್ಧತಿ ತನ್ನ ಅಸ್ಥಿತ್ವವನ್ನು ಕಳೆದುಕೊಳ್ಳುತ್ತಾ ವಸಾಹತು ಶಿಕ್ಷಣ ಕ್ರಮಕ್ಕೆ ಆಕರ್ಷಿತಗೊಳ್ಳುತ್ತಿರುವ ಬಗೆಯನ್ನು ಇಲ್ಲಿ ಕಾಣುತ್ತೇವೆ. ಹೊಸ ಶಿಕ್ಷಣ ಹೊತ್ತು ತಂದ ಜ್ಞಾನ ಪ್ರಪಂಚವು ಮಲೆನಾಡಿನ ಬದುಕಿನಲ್ಲಿ ಹೊಸ ಪ್ರಭಾವದ ಮುಂಬೆಳಕನ್ನು ಮೂಡಿಸುತ್ತಿರುವುದರ ಸೂಚನೆಗಳು ಇಲ್ಲಿವೆ. ತಮ್ಮ ಮತಕ್ಕೆ ಜನರನ್ನು ಸೇರಿಸಿಕೊಳ್ಳುವ ಮತಾಂತರದ ಆಮಿಷವಾಗಿ ಮೇಲುನೋಟಕ್ಕೆ ಆಧುನಿಕ ಶಾಲೆ ಕಂಡರೂ ಪುರೋಹಿತಶಾಹಿಯ ಕಬಂಧ ಬಾಹುಗಳ ಹಿಡಿತದಿಂದ ಬಿಡಿಸಿಕೊಳ್ಳಲು ಹೊಸ ಶಾಲೆ ಹೊಸ ಎಚ್ಚರವನ್ನು ಮೂಡಿಸಿತು.

ಮಲೆನಾಡಿನ ಎಲ್ಲ ಬಗೆಯ ಕಾರ್ಯ ಚಟುವಟಿಕೆಗಳಿಗೆ ಕೇಂದ್ರವಾಗಿದ್ದ ಅಂತಕ್ಕನ ಹೋಟೆಲ್ ಮನೆ; ಎಲ್ಲಾ ಕಾರ್ಯ ಚಟುವಟಿಕೆಗಳ ಪರಿಣಾಮವಾಗಿಯೇ ಸಂಪೂರ್ಣವಾಗಿ ಅವನತಿ ಹೊಂದಿ 'ಹೋಟ್ಲುಮನೆ' ಸ್ಕೂಲ್ ಮನೆಯಾಗಿ ಪರಿವರ್ತನೆಗೊಂಡ ಮುದುಕಿ ಅಂತಕ್ಕನ ಬದುಕಿಗೆ ಆಶ್ರಯವಾದಂತೆ ಮಲೆನಾಡಿನ ಯುವಪೀಳಿಗೆಯ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಡುವ ಕೇಂದ್ರವಾಗಿ ಪರಿವರ್ತನೆಗೊಂಡಿತು. ಕಾನೂರು ಹೆಗ್ಗಡಿತಿ ಕಥನ ಆರಂಭವಾಗುವುದೇ ಅಂತಕ್ಕನಂತಹ ಸ್ಕೂಲ್ ಮನೆಯಲ್ಲಿ ಕಲಿತು ಮೈಸೂರು ಬೆಂಗಳೂರು ನಗರಗಳಿಗೆ ಹೋಗಿ ವಿದ್ಯಾಭ್ಯಾಸ ಮಾಡಿ ಊರಿಗೆ ಮರಳುವ ವಿದ್ಯಾವಂತ ಯುವಕರ ಭೌತಿಕ ಮತ್ತು ಮಾನಸಿಕ ವಿವರಗಳ ಚಿತ್ರಗಳಿಂದಲೇ.

ಕಾನೂರು ಹೆಗ್ಗಡಿತಿ ಕಾದಂಬರಿ ಕಥನ ಕಾಲಕ್ಕಾಗಲೇ ಮಲೆನಾಡಿನ ಬದುಕು ಅನೇಕ ಬಗೆಗಳಲ್ಲಿ ಆಧುನಿಕತೆಯ ಕಡೆಗೆ ಮುಖ ಮಾಡಿರುವುದನ್ನು ಕಾಣುತ್ತೇವೆ. ಮದುಮಗಳು ಕಾದಂಬರಿಯಲ್ಲಿ ಆಧುನಿಕತೆಯ ಬಗೆಗೆ ವ್ಯಕ್ತವಾಗುವ ಭೂಮಿ, ಆತಂಕ, ತಲ್ಲಣ, ವಿಸ್ಮಯಗಳು ಕಾನೂರು ಕಥನದಲ್ಲಿ ಬದುಕಿನ ಭಾಗವೇ ಆಗಿ ಸೇರಿ ಹೋಗಿವೆ. ಮತಾಂತರದ ಬಗೆಗಿನ ಪ್ರತಿರೋಧದ ಧೋರಣೆಗಳು ಕಾನೂರು ಕಥನದಲ್ಲಿ ಮದುಮಗಳು ಕಾದಂಬರಿಯ ಪ್ರಮಾಣದಲ್ಲಿ ಇಲ್ಲದಿದ್ದರೂ ಮತಾಂತರದ ಪ್ರಕ್ರಿಯೆಯ ಬಗ್ಗೆ ವಿಡಂಬನೆ ಇರುವುದನ್ನು ನೋಡಬಹುದು. ಕ್ರೈಸ್ತ ಧರ್ಮದ ಬಗೆಗೆ ಮದುಮಗಳು ಕಾದಂಬರಿಗಿಂತ ಭಿನ್ನ ಧೋರಣೆ ಹೆಗ್ಗಡಿತಿ ಕಾದಂಬರಿಯಲ್ಲಿ ವ್ಯಕ್ತವಾಗಿದೆ. ಪುರೋಹಿತಶಾಹಿ ವ್ಯವಸ್ಥೆಯಿಂದ ವ್ಯಾಪ್ತಿ ಸಮಷ್ಟಿ ಬದುಕು ಮೌಢ್ಯದ ಕಬಂಧಗಳಲ್ಲಿ ಸಿಕ್ಕಿ ನರಳುತ್ತಾ, ವ್ಯಕ್ತಿ ಮತ್ತು ಕೌಟುಂಬಿಕ ದುರಂತಗಳಿಗೆ ಕಾರಣವಾಗಿದ್ದ ಅನಿಷ್ಟಗಳ ಬಗೆಗೆ ಎಚ್ಚರವನ್ನು ಉಂಟು ಮಾಡುವ ಮೌಲ್ಯಗಳನ್ನು ಮುಖಾಮುಖಿಯಾಗಿಸಿದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಸನಾತನ ಹಿಂದೂಧರ್ಮದ ಮಾನವೀಯ ಮೌಲ್ಯಗಳ ಬಗೆಗೆ ತೋರುವ ಕುವೆಂಪು ಅವರ ಆಸ್ಥೆ 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಬೌದ್ಧಮತದ ಕಡೆಗೆ ಅವರ ಸಂವೇದನೆ ಪಲ್ಲಟಗೊಂಡಿರುವುದು ಕುತೂಹಲದಿಂದ ಗಮನಿಸಬೇಕಾದ ವಿಚಾರವಾಗಿದೆ.

''ಉದಯಿಸುತಿಹನದೊ ಅಭಿನವ ದಿನಮಣಿ
ಸಹ್ಯಾದ್ರಿಯ ಶೃಂಗಾಳಿಯ ಮೇಲೆ....
..........................................ಓ ಕ್ರಾಂತಿಯ ಪುತ್ರರೆ ಬಾಳಿ![೧]

ಈ ಮೇಲಿನ ಉದ್ಧರಣೆಯು 'ಕಾನೂರು ಹೆಗ್ಗಡಿತಿ' ಕಥನದ ಕೊನೆಯ ನವಯುಗವಾಣಿಯ ಕವಿತೆ. ಇದು ವಸಾಹತುಶಾಹಿ ಸಂಸ್ಕೃತಿ ಮತ್ತು ಪುರೋಹಿತಶಾಹಿಯ ಕ್ರೌರ್ಯಗಳಿಂದ ಬಿಡುಗಡೆ ಹೊಂದಿ 'ಜ್ಞಾನದ ವಿಜ್ಞಾನದ ಮೇಲೆ ಖಡ್ಗದಿಂದ ನವಜೀವನ ಸಂಕ್ರಾಂತಿಗೆ ಭಾರತಮಾತೆಯ ಕನ್ನಡಾಂಬೆಯ ಪುತ್ರರು ಸನ್ನದ್ಧಗೊಳ್ಳಬೇಕೆಂಬ ತೀವ್ರ ಆಕಾಂಕ್ಷೆಯಿಂದ ನಿವೇದಿಸಿಕೊಳ್ಳುತ್ತದೆ. ಇಂಥ ಆಕಾಂಕ್ಷೆ ಪುರೋಹಿತಶಾಹಿ ಮತ್ತು ವಸಾಹತುಶಾಹಿ ಸಂಸ್ಕೃತಿಯ ಸ್ವೀಕರಣೆ ಮತ್ತು ನಿರಾಕರಣೆಯ ನೆಲೆಗಳಿಂದ ಶೋಧಿತಗೊಂಡುದುದೇ ಆಗಿದೆ.

ಎರಡೂ ಕಾದಂಬರಿಗಳು ದಟ್ಟವಾದ ಪ್ರಾದೇಶಿಕ ವಿವರಗಳಿಂದ ಕೂಡಿರುವುದೇ ಅದಕ್ಕೆ ರಾಷ್ಟ್ರೀಯತಾ ಆಯಾಮವನ್ನು ತಂದು ಕೊಡುತ್ತದೆ. ಕ್ರೈಸ್ತ ಮಿಶನರಿಗಳು ಮತ್ತು ಅವರ ಮತಾಂತರ ಚಟುವಟಿಕೆಗಳ ಖಂಡನೆಯೇ ಇಲ್ಲಿ ರಾಷ್ಟ್ರೀಯತೆಯನ್ನು ಎತ್ತಿಹಿಡಿಯುವ ತಂತ್ರವಾಗಿ ಬಳಕೆಯಾಗಿದೆ. ಆದರೆ ವಸಾಹತುಶಾಹಿ –ಕ್ರೈಸ್ತ ಮಿಶನರಿಗಳ ಷಡ್ಯಂತ್ರಗಳನ್ನು ಖಂಡಿಸುವ ನಿಲುವನ್ನು ಹೊಂದಿರುವ ಕಾದಂಬರಿಗಳು ಆಧುನಿಕತೆಯನ್ನು ಒಪ್ಪಿಕೊಂಡಿರುವುದು ಗಮನಿಸಬೇಕಾದ ಅಂಶ. ಹಾಗೆಂದು ಆಧುನಿಕತೆಯನ್ನು ಅದರ ಎಲ್ಲ ಅನಿಷ್ಟಗಳೊಂದಿಗೆ ಒಪ್ಪಿಕೊಳ್ಳಲಾಗಿದೆ ಎಂದಲ್ಲ ಕಾದಂಬರಿಗಳಲ್ಲಿ ಆಧುನೀಕರಣಗಳ ಬಗ್ಗೆ ವ್ಯಕ್ತವಾಗುವುದು ಸುಧಾರಣಾವಾದಿ ಮನೋಭಾವ ಆಧುನಿಕತೆ ಎಷ್ಟು ಬೇಕೋ ಅಷ್ಟು ನಮಗೆ ಎಲ್ಲಿಯವರಗೆ ಅನುಕೂಲಕರವೋ ಅಲ್ಲಿಯವರೆಗೆ ಹಾಗೆ ನೋಡಿದರೆ ಇಲ್ಲಿ ವ್ಯಕ್ತವಾಗುವ ಈ ಧೋರಣೆ ಸ್ವಲ್ಪಮಟ್ಟಿಗೆ ಗಾಂಧಿ ಪ್ರಣೀತವಾದದ್ದು ಎನಿಸುತ್ತದೆ. ಆಧುನಿಕತೆ–ಸಂಪ್ರದಾಯಗಳ ನಡುವಣ ಸಂಘರ್ಷಗಳನ್ನು ದಾಖಲಿಸುವ ಕಾದಂಬರಿಗಳು ಆವೆರಡನ್ನೂ ಎದುರಾಳಿಗಳನ್ನಾಗಿ ಚಿತ್ರಿಸುವುದಿಲ್ಲ.

ಹಾಗೆಯೇ ಕೆಳಜಾತಿಗಳಲ್ಲಿ ಹಳೆಪೈಕದವರು ಮತ್ತು ಅಸ್ಪೃಶ್ಯ ಜಾತಿಗಳಲ್ಲೂ ಹೊಸ ಅರಿವಿನ ಕುರುಹುಗಳಿವೆ. ತಮ್ಮ ಮೇಲೆ ಆಗುತ್ತಿರುವ ದಬ್ಬಾಳಿಕೆಯ ಬಗ್ಗೆ ಅರಿವಿದೆ. ಹಳೇಪೈಕದ ಸೇಸನಾಯ್ಕ ತಾನು ಒಕ್ಕಲಿಗರಿಗಿಂತ ಯಾವುದರಲ್ಲಿ ಕಡಿಮೆಯೆಂದು ಕೇಳುತ್ತಾನೆ. ''ನಮ್ಮ ಕುದುರೆ ನಮ್ಮ ದಂಡಿಗೆ ನಮ್ಮ ವಾದ್ಯ ನಮ್ಮ ಭೋವಿಗಳು ನಾವು ಖರ್ಚು ಮಾಡುವುದಕ್ಕೆ ಇವರದೇನು ಅಡ್ಡಿ? ಮುಂದುವರಿದು ತನ್ನ ಜಾತಿಯವರಿಗೆ ಹೇಳುತ್ತಾನೆ. ''ನಮ್ಮ ದಂಡಿಗೆ ಒಕ್ಕಣೆ ಕುದುರೆ ಹಕ್ಕಿಗೆ ಗೌಡ ಮಕ್ಕಳು ಅಡ್ಡ ಬರುವುದು ಯಾವ ನ್ಯಾಯ, ನಾವೇಕೆ ಹೊಡೆದಾಟಕ್ಕೆ ಹೆದರಬೇಕು. ನಾಳೆ ನನ್ನ ಮಗನ ಮದುವೆ

೧. ಕಾನೂನು ಹೆಗ್ಗಡಿತಿ–ಕುವೆಂಪು, ಪುಟ ೫೯೧

ಮಾಡುವಾಗ ಕುದುರೆ ಮೇಲಾದರೂ ಹೆಣ್ಣುಗಂಡು ಕೂರಿಸಿಕೊಂಡು ಹೋಗಲೇ ಬೇಕು. ಜಾತಿಯವರು ನೀವೆಲ್ಲಾ ಸಹಾಯ ಮಾಡಿದರೆ ನಾನೊಂದು ಕೈ ನೋಡೇ ಬಿಡ್ತೀನಿ.''
(ಮಲೆಗಳಲ್ಲಿ ಮದುಮಗಳು, ಪು 15)

ತಮಗೆ ಪರಂಪರಾಗತವಾಗಿ ಇಲ್ಲದಿದ್ದ ಹಕ್ಕುಗಳನ್ನು ಪಡೆದುಕೊಳ್ಳಲು ಹಳೆಪೈಕರು ಆಶಿಸುವುದನ್ನು ಆಧುನೀಕರಣದೊಂದಿಗೆ ಬಂದ ಸಂಸ್ಕೃತೀಕರಣ ಜನತಾಂತ್ರಿಕ ಆಶಯಗಳನ್ನು ಇಲ್ಲಿ ಕಾಣಬಹುದು. ಅಷ್ಟೇ ಏಕೆ ತಿಮ್ಮಿಗೆ ಗುತ್ತಿಯೂ ಹೇಳುತ್ತಾನೆ. ತಮ್ಮ ಮದುವೆ ಮೆರವಣಿಗೆಯನ್ನು ದಂಡಿಗೆ ಕುದುರೆಗಳ ಮೇಲೆ ಕೊಂಡೊಯ್ಯಬೇಕೆಂದು ಅದು ಲಹರಿಯಂತೆ ಕಂಡರೂ ಅಲ್ಲಿಯ ಧ್ವನಿಯನ್ನು ಆಸೆಯನ್ನು ಕಡೆಗಣಿಸುವಂತಿಲ್ಲ

ಒಟ್ಟಿನಲ್ಲಿ ಆಧುನಿಕತೆಯ ಅಂಗಾಂಗಗಳೇ ಆದ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಶೂದ್ರಾತಿ ಶೂದ್ರ ಚಳುವಳಿಗಳೇ ಕುವೆಂಪು ಅವರ ಕಾದಂಬರಿಗಳ ವಸ್ತುಶಿಲ್ಪಗಳನ್ನು ನಿಯಂತ್ರಿಸಿವೆ, ಪ್ರೇರೇಪಿಸಿದೆ ಎಂದೂ ಮತ್ತು ಅತ್ಯುತ್ತಮ ರಾಷ್ಟ್ರೀಯ ಚಿಂತನೆಯ ಕೇಂದ್ರ ಕಾಳಜಿಗಳೇ ಕಲಾವಿದ ಕುವೆಂಪು ಅವರ ಅಭಿವ್ಯಕ್ತಿಯಲ್ಲಿ ಪಡಿಮೂಡಿವೆ ಎಂದು ಹೇಳಬಹುದು.

**********

## VIII. ಉಪಸಂಹಾರ :–

ಈ ಶತಮಾನದ ಮಹತ್ವದ ಕವಿಗಳಲ್ಲಿ ಒಬ್ಬರು. ಸಂಕೀರ್ಣವಾದ ಸಾಹಿತ್ಯ ಶಕ್ತಿಯನ್ನು ಉಳ್ಳವರು. ಪ್ರಾಚೀನ ಉಪನಿಷತ್ತುಗಳ ದಾರ್ಶನಿಕತೆಯ ಸಮರ್ಥನೆಯ ಜೊತೆಯಲ್ಲೇ ಕ್ರಾಂತಿಯ ಧೋರಣೆಗಳನ್ನು ಬೆಳೆಸಿಕೊಂಡವರು. ಆಧ್ಯಾತ್ಮಿಕತೆಯನ್ನು ಮತ್ತು ಮತ ಧರ್ಮಕ್ಕಿಂತ ಭಿನ್ನವಾದ ಪ್ರತಿಪಾದನೆಯ ಜೊತೆಯಲ್ಲೇ ವೈಚಾರಿಕತೆಯನ್ನು ರೂಢಿಸಿಕೊಂಡವರು. ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಕೃಷಿ ಮಾಡಿ ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸಿದವರು. ಅವರ ಪ್ರತಿಭೆ ಗದ್ಯಪದ್ಯಗಳೆರಡರಲ್ಲಿಯೂ ಪ್ರಜ್ವಲಿಸಿದೆ.

'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಇವು ಕುವೆಂಪು ಅವರ ಎರಡು ಬೃಹತ್ ಕಾದಂಬರಿಗಳು. ಈ ಶತಮಾನದ ಕನ್ನಡದ ಕಾದಂಬರಿ ಪರಂಪರೆಯಲ್ಲಿ ಅತ್ಯಂತ ಮಹತ್ವದ ಸ್ಥಾನ ಪಡೆದಿರುವಂತವು. ಗದ್ಯ ಮಹಾಕಾವ್ಯಗಳಾದ ಈ ಎರಡು ಕಾದಂಬರಿಗಳಲ್ಲಿ ಅವರು ಮಲೆನಾಡಿನ ಜೀವನವನ್ನು ಅಮರವಾಗಿಸಿದ್ದಾರೆ. ಶ್ರೇಷ್ಠ ಕಲಾಕೃತಿಗಳಾಗಿರುವಂತೆಯೇ ಸಮಾಜ ಜೀವನದ ಅಧ್ಯಯನಗಳೂ ಆಗಿವೆ. ಮಲೆನಾಡಿನ ಮಣ್ಣಿನಲ್ಲಿ ಬೇರು ಬಿಟ್ಟ ವೈವಿಧ್ಯಮಯ ಬದುಕನ್ನು ಪ್ರಾದೇಶಿಕತೆಯ ಸೊಗಡಿನಿಂದ ಮೈದಳೆದು ಮೂಡಿ ಬಂದಿರುವ ಈ ಕಾದಂಬರಿಗಳು ಸಾಹಿತ್ಯ ಪ್ರಪಂಚದ ಶ್ರೇಷ್ಠ ಕೃತಿಗಳು.

ಎಲ್ಲಿಂದ ಪ್ರತಿಷ್ಠೆ ಅಹಂ ಹುಟ್ಟುತ್ತಿತ್ತೋ ಅಲ್ಲಿಂದಲೇ ಹೊಸತನ್ನು ಬದಲಾವಣೆಯನ್ನು ತರುವುದು ತಂದುಕೊಳ್ಳುವುದು ಬಸವಣ್ಣ ಕುವೆಂಪು ಅವರಿಗೆ ಅಗತ್ಯವಾಗಿತ್ತು. ಅವರವರ ಸಮಕಾಲೀನವಾಗಿ ಅನಿವಾರ್ಯ ಮತ್ತು ಅಗತ್ಯವಾಗಿ ಪರಿಣಮಿಸಿತು. ಇದನ್ನು ಕುವೆಂಪು ಅವರು ತಮ್ಮ ಮಲೆಗಳಲ್ಲಿ ಮದುಮಗಳು ಕೃತಿಯ ಆರಂಭದಲ್ಲಿ ಸ್ಪಷ್ಟಪಡಿಸುತ್ತಾರೆ. ಇಲ್ಲಿ ಯಾರೂ ಮುಖ್ಯರಲ್ಲ.....

ಅನುವಂಶಿಕ ಶ್ರೇಷ್ಠತ ಜಾತಿಪದ್ಧತಿ ಮೂಢನಂಬಿಕೆ ವರ್ಗವ್ಯವಸ್ಥೆ ಇಡಿಯಾಗಿ ಮಾನವ ಬದುಕನ್ನು ಹಿಂಡುವ ಪ್ರಕ್ಷುಬ್ಧತೆ ನಿರ್ದಿಷ್ಟ ಕಾಲಗಡಿಯಲ್ಲಿ ಮುಗಿಯುವಂಥದಲ್ಲ ಅವರದು ನಿರಂತರ ಪ್ರಕ್ರಿಯೆ. ಅದರ ನಡುವೆಯೇ ವರ್ತಮಾನದ ಒಳಿತನ್ನು ಹುಡುಕಬೇಕು. ಈ ನಿಟ್ಟಿನಲ್ಲಿ ಪ್ರಯತ್ನಶೀಲರಾಗಬೇಕಾದ್ದು ಇಂದಿನ ತುರ್ತು ಕೂಡ. ಕುವೆಂಪು ಅವರಲ್ಲಿ ಈ ಆಶಯ ಮಹಾಕಾವ್ಯ ಕಾವ್ಯ ನಾಟಕಗಳಲ್ಲಿ ನೋಡಬಹುದು.

ಕುವೆಂಪು ಅವರು ಬದುಕನ್ನು ವಿಶಾಲವಾದ ದೃಷ್ಟಿಯಲ್ಲಿ ನೋಡಿದವರು. ಈ ಬದುಕು ಸಮಾಜದ ಕೆಳಸ್ತರದವರಿಗೂ ದಕ್ಕಬೇಕೆಂದು ಬಯಸಿದ ಚೈತನ್ಯ ಕುವೆಂಪು ಅವರದು. ಅದನ್ನು ಹೂವಯ್ಯನಂಥ ಎತ್ತರದ ಪ್ರಜ್ಞಾ ಕೇಂದ್ರವನ್ನು ಸಾಕ್ಷಿಯಾಗಿಟ್ಟುಕೊಂಡು ಸುಬ್ಬಮ್ಮನ ಕಣ್ಣಿನಿಂದ ಕಾಣಿಸುವುದು ಇದೆಯಲ್ಲ ಅದೇ ಬಹುದೊಡ್ಡ ಸಾಧನೆ; ಸಾಮಾಜಿಕ ಕ್ರಾಂತಿ–ವಾಸ್ತವದಲ್ಲಿ ಭಾರತೀಯ

ಧರ್ಮ ಮತ್ತು ಸಂಸ್ಕೃತಿಯ ನೆಲೆಯಲ್ಲಿ ಹೆಣ್ಣು ಶೋಷಿತಳು ದಲಿತರಲ್ಲಿ ದಲಿತಳು. ಅವಳಿಗೆ ಅವಳದೇ ಆದ ಬದುಕಿಲ್ಲ; ಅಸ್ತಿತ್ವವಿಲ್ಲ ಅವಳಿಗೆ ಕೈಕಾಲುಗಳು ಮಾತ್ರ ಇದೆ ಅವೆಲ್ಲವು ಹೆರೆವರ ಸೇವೆಗಾಗಿ. ಅವಳಿಗೆ ದೇಹವಿದೆ ಅದು ಪುರುಷರ ಭೋಗದ ತೃಪ್ತಿಗಾಗಿ ಮಾತ್ರ. ಕುವೆಂಪು ಮೊದಲ ಬಾರಿಗೆ ಅವಳದೇ ಆದ ಸ್ವತಂತ್ರ ಅಸ್ತಿತ್ವವನ್ನು ಕೊಟ್ಟು ಅವಳಿಗೂ ಜೀವ ಇದೆ ಆಸೆ ಆಕಾಂಕ್ಷೆಗಳಿವೆ ಎಂಬುದನ್ನು ಮನದಟ್ಟು ಮಾಡುತ್ತಾರೆ. ಎರಡು ಕಾದಂಬರಿಗಳಲ್ಲಿ ಹೆಣ್ಣನ್ನು ಪ್ರಧಾನ ಭೂಮಿಕೆಯಲ್ಲಿ ನಿಲ್ಲಿಸಿರುವುದರಲ್ಲೇ ಕುವೆಂಪು ಅವರ ಸಾಮಾಜಿಕ ಕ್ರಾಂತಿಯ ಸೂಕ್ಷ್ಮ ಸಂವೇದನೆ ಅಡಗಿದೆ.

ಕಾಡು ನಾಡು ಸಂಸ್ಕೃತಿಯನ್ನು ಬೆಸೆಯುವ ಕ್ರಿಯೆ ಏಕಕಾಲದಲ್ಲಿ ಈ ಕಾದಂಬರಿಯಲ್ಲಿ ಘಟಿಸುತ್ತದೆ. ಕಾಡಿನ ಸಂಸ್ಕೃತಿಯ ಅರ್ಥಪೂರ್ಣತೆಯನ್ನು ಪ್ರಕೃತಿ, ಪ್ರಕೃತಿಗೆ ಪರ್ಯಾಯವಾಗಿ ನಿಲ್ಲುವ ಹೆಣ್ಣು, ದಲಿತ ಪಾತ್ರಗಳು ಪ್ರತಿನಿಧಿಸಿದರೆ ನಾಡಿನ ಸಂಸ್ಕೃತಿಯ ಪೊಳ್ಳುತನವನ್ನು ವೈದಿಕ ಗೊಡ್ಡು ಸಂಪ್ರದಾಯಕ್ಕೆ ಜೋತುಬಿದ್ದ ಪುರೋಹಿತಶಾಹಿ ಧೋರಣೆಯ ಅರೆಬರೆಯಾಗಿ ದ್ವೇಷವನ್ನು ನಂಬುವ ಪುರುಷ ಪಾತ್ರಗಳು ಪೋಷಿಸುತ್ತದೆ.

ಕುವೆಂಪು ಅವರೆದುರು ಅಖಂಡ ಸಂಸ್ಕೃತಿಯ ಕಲ್ಪನೆಯಿತ್ತು. ಸಮಸ್ತ ಜೀವಜಂತುಗಳು ಆ ಕಲ್ಪನೆಯ ಒಳಗೆ ಅರ್ಥಪೂರ್ಣ ಪಾತ್ರ ವಹಿಸುತ್ತವೆ. ಜೀವನ ಕ್ರಮದ ಅಂಗಗಳಾಗುತ್ತವೆ; ಪ್ರಕೃತಿಯ ನಿಗೂಢ ಮುಖಗಳಾಗುತ್ತವೆ. ಭೂಮಾಲೀಕರ ಮತ್ತು ಕೆಳವರ್ಗದವರ ಘರ್ಷಣೆ ಕಾದಂಬರಿಗಳ ಒಳರಚನೆಯಲ್ಲಿಯೇ ಬಿಚ್ಚಿಕೊಳ್ಳುತ್ತದೆ. ಆ ಒಳರಚನೆಯಲ್ಲಿಯೇ ಕೆಳವರ್ಗದ ಪಾತ್ರಗಳು ಶಕ್ತಿಗೊಂಡು ಇಡಿ ವಸ್ತುವನ್ನು ಅರ್ಥೈಸುವುದನ್ನು ಕಾಣುತ್ತೇವೆ. ಉದಾ :– ಮಲೆಗಳಲ್ಲಿ ಮದುಮಗಳು ಕಾದಂಬರಿಯ ಆರಂಭದಿಂದ ಅಂತ್ಯದವರೆಗೂ ಬರುವ ಗುತ್ತಿಯ ನಾಯಿ ನಾಯಿಗುತ್ತಿಯ ಕಾಮವಾಸನೆ ಮಾನವ ಸಹಜ ಆಸೆ ಆಕಾಂಕ್ಷೆ ಪ್ರತೀಕ. ಗುತ್ತಿಯ ನಾಯಿ ಪ್ರವಾಹದಲ್ಲಿ ಕೊಚ್ಚಿ ಹೋಗುತ್ತವೆ. ಈ ಕೊಚ್ಚಿ ಹೋಗುವ ಕ್ರಿಯೆಯಲ್ಲಿ ಗುತ್ತಿಯ ಅಥವಾ ಜೀವನದ ದರ್ಶನವಿದೆ.

ಹತ್ತು ಹಲವು ಆಸೆಗಳಿಂದ ತಿಮ್ಮಿಯನ್ನು ಪಡೆದ ನಾಯಿಗುತ್ತಿ ಅವಳಿಗಾಗಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಾನೆ. ಪಡಬಾರದ ಪಾಡು ಪಡುತ್ತಾನೆ. ಇಲ್ಲಿ ಜೀವನ ಎಂದರೆ ಬದುಕುವುದು, ಬದುಕುವುದು ಎಂದರೆ ಸಮಸ್ಯೆಗಳನ್ನು ಎದುರಿಸುವುದು ಸಮಸ್ಯೆಗಳನ್ನು ಎದುರಿಸುತ್ತಿದ್ದದ್ದು ಎಂದರೆ ಕಾಮದ ಕಾಳಿಕೆಯನ್ನು ಕಳೆದುಕೊಂಡು ಪ್ರೇಮದ ತಾಳುವಿಕೆಯನ್ನು ಗಳಿಸುವುದು. ಹೀಗಾಗಿ 'ಮಲೆ' ಪ್ರಕೃತಿ ಸಂಕೇತವಾದರೆ 'ಮದುಮಗಳು' ಅದನ್ನಾಳುವ ಜೀವಿಗಳ ಸಂಕೇತವಾಗುತ್ತವೆ. ಈ ಜೀವ, ಪ್ರಕೃತಿ ಎದುರುಬದರು ನಿಂತು ಹೋರಾಡುವುದಿಲ್ಲ. ತಮ್ಮ ಜೀವ ವಿರೋಧಿ ಗುಣಗಳನ್ನು ಕಳೆದುಕೊಳ್ಳುತ್ತ ಹೋಗುತ್ತದೆ. ಕುವೆಂಪು ಅವರ ಉದ್ದೇಶ ಆಶಯ ಇದೇ ಆಗಿದೆ. ಇದರ ನಡುವೆ ವರ್ಣ ವರ್ಗ ಸಂಘರ್ಷಗಳು ಹಾದು ಹೋಗುತ್ತದೆ . ಇವೆಲ್ಲವು ಸಮಾಜ ರೇಖೆಯಲ್ಲಿ ನಿಲ್ಲುವಂತಾಗಬೇಕೆಂದು ಬಯಸುವುದೇ ಕುವೆಂಪು ಅವರ ಮಾನವೀಯ ತುಡಿತ ಸಾಮಾಜಿಕ ಕ್ರಾಂತಿಯ ಮೊರೆತವಾಗಿದೆ.

ಕುವೆಂಪು ಅವರ ಪೂರ್ಣದೃಷ್ಟಿಯು ವ್ಯಕ್ತಿ ಮತ್ತು ಸಮಾಜದ ಉದ್ಧಾರ ಕೇಂದ್ರಿತವಾಗಿದೆ. ವ್ಯಕ್ತಿ ದೌರ್ಬಲ್ಯಗಳನ್ನು ಕುರಿತು ಚಿಂತನೆ ಸಾಮಾಜಿಕ ವಿಷಮತೆಯನ್ನು ಕುರಿತ ಚಿಂತನೆ ಅವೆರಡನ್ನು ನಿವಾರಿಸುವ ಪ್ರಗತಿಯೆಡೆಗೆ ಸಾಗಬೇಕಾದ ಮಾರ್ಗದ ಪೂರ್ಣದೃಷ್ಟಿ ಕುವೆಂಪು ಅವರ ಕಾವ್ಯಗಳಲ್ಲಿ ವೈಚಾರಿಕ ಪ್ರಬಂಧಗಳಲ್ಲಿ ಭಾಷಣಗಳಲ್ಲಿ ಪಡಿಮೂಡಿದೆ. ಇವುಗಳಲ್ಲಿ ಆಳವಾದ ಚಿಂತನಶೀಲತೆಯದೆ, ವಿಶಾಲ ಜೀವನದೃಷ್ಟಿ ಇದೆ, ವ್ಯಷ್ಟಿ ಸಮಷ್ಟಿಗಳ ವಿಕಾಸದ ಚಿಂತನೆಯಲ್ಲಿ ಪೂರ್ಣದೃಷ್ಟಿ ಎದ್ದು ಕಾಣುತ್ತದೆ. ಅವರ ಸಾಹಿತ್ಯದ ಭಾಗವು ಆಗಿ ಅಭಿವ್ಯಕ್ತಿಗೊಂಡಿದೆ. ಶಿಕ್ಷಣ ಸಾಮಾಜಿಕ ಬದಲಾವಣೆ ಮತಧರ್ಮಗಳು ವ್ಯಷ್ಟಿ ಸಮಷ್ಠಿಗಳನ್ನು ಕುರಿತ ವಿವೇಚನೆಯಲ್ಲಿಯೂ ಪೂರ್ಣದೃಷ್ಟಿಯಿದೆ.

ಕುವೆಂಪು ಅವರ ಕಾದಂಬರಿ ಕಾನೂರು ಹೆಗ್ಗಡಿತಿಯು ಅಂದಿನ ಪರಂಪರೆಗಳ ಪದ್ಧತಿಗಳ ಅಂಧಶ್ರದ್ಧೆಗಳ ಪುರೋಹಿತಶಾಹಿಯ ಶೋಷಣೆ, ಶೂದ್ರ ಕೆಳವರ್ಗದವರ ಕೀಳರಿಮೆ ಮೊದಲಾದವುಗಳ ಸಂಘರ್ಷ ಜಿಜ್ಞಾಸೆಗಳಲ್ಲಿ ಅವರ ಜೀವನಾನುಭವದ ವ್ಯಕ್ತಿಯ ಸಮಷ್ಟಿಯ ಹಿತವನ್ನು ಕುರಿತ ಕಾಳಜಿಪೂರ್ವಕವಾದ ಮೌಲ್ಯ ನಿಷ್ಠೆಯಾಗಿದೆ ಇದು. ಅವರ ವೈಚಾರಿಕತೆಯ ತಳಹದಿ ಎನ್ನಬಹುದು.

ನವೋದಯ ಕಾಲದ ಸುಧಾರಣೆ, ಆದರ್ಶ, ರಮ್ಯತೆ ಮುಂತಾದ ರೋಮ್ಯಾಂಟಿಕ್ ಪರಿಕಲ್ಪನೆಗಳನ್ನು 'ಕಾನೂರು ಹೆಗ್ಗಡಿತಿ' ಧನಾತ್ಮಕವಾಗಿ ದುಡಿಸಿಕೊಂಡಿರುವುದು ಸ್ಪಷ್ಟವಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ವಸ್ತು ನವ್ಯದ ಸವಾಲುಗಳನ್ನು ಸ್ವೀಕರಿಸಿದ್ದು. ಇದರ ರಚನೆ ಉದ್ದೇಶಗಳಲ್ಲಿ ನೈಜತೆಗೆ ವಸ್ತುಸ್ಥಿತಿಗೆ ಆದ್ಯತೆ ನೀಡಲಾಗಿದೆ. ಮಣ್ಣಿನ ವಾಸನೆ, ಕಟು ವಾಸ್ತವದ ಗಮಲು, ನಿಜ ಜೀವನದ ಒಡಲು ನಮಗಿಲ್ಲಿ ಗೋಚರಿಸುತ್ತದೆ. ನವ್ಯದ ಪ್ರಾರಂಭದಲ್ಲಿ ಹೊರಬಂದ ಕೃತಿ.

'ಕಾನೂರು ಹೆಗ್ಗಡಿತಿ'ಯಲ್ಲಿ ಅವಿಭಕ್ತ ಕುಟುಂಬ ಒಡೆದುಹೋಗುವ ವಿಘಟನಾ ಕ್ರಿಯೆ ಇದೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕುಟುಂಬ ವಿಘಟನೆಯ ಬದಲಾಗಿ ಕುಟುಂಬ ಸಂಯೋಜನೆಯ ರಚನಾತ್ಮಕ ಕ್ರಿಯೆ ಕೆಲಸ ಮಾಡಿದೆ. ಪ್ರೊ.ಚನ್ನಯ್ಯನವರು ಅಭಿಪ್ರಾಯಿಸುವಂತೆ 'ಪಾರು ಮಾಡುವ ಪಾರಾಗುವ ಕ್ರಿಯೆ' ಎಂದು ಹೇಳಿದ್ದಾರೆ. ಎರಡೂ ಕಾದಂಬರಿಗಳಲ್ಲಿ ಸ್ತ್ರೀ ಮಾತೃಕೆಯ ಪ್ರತಿಷ್ಠಾಪನೆ ಎದ್ದುಕಾಣುತ್ತದೆ. ಸ್ವಭಾವತಃ ಕುವೆಂಪುರವರದು ಸ್ತ್ರೀಪರವಾದ ಧೋರಣೆ, ಒಲವು ಎಲ್ಲವೂ ನಿಚ್ಚಳವಾಗಿ ಕಾಣಬಹುದಾಗಿದೆ. ಕಾದಂಬರಿಗಳ ಶೀರ್ಷಿಕೆ ಅದನ್ನು ಹೇಳುತ್ತದೆ.

ಕಾದಂಬರಿಗಳೆರಡೂ ವಿಶಿಷ್ಟ ಪಾತ್ರಗಳನ್ನು ತುಂಬಿಕೊಂಡ ಜೀವಂತ ಕಣಜಗಳಾಗಿದೆ. ಒಂದೊಂದು ಪಾತ್ರವೂ ಬದುಕಿನ ಮೌಲ್ಯಗಳನ್ನು, ರಾಗದ್ವೇಷಗಳನ್ನು ಸಾಕ್ಷಾತ್ಕರಿಸುವಲ್ಲಿ ಯಶಸ್ವಿಯಾಗಿದೆ.

ಕುವೆಂಪು ಅವರ ಕಥನ ಕಲೆಯಲ್ಲಿ ಎದ್ದುಕಾಣುವ ತಂತ್ರ ಎಂದರೆ ವೈದೃಶ್ಯಾಂಶಗಳನ್ನು ಮುಖಾಮುಖಿಯಾಗಿಸುವ ಕ್ರಿಯೆ. ಒಂದರ ವಿರುದ್ಧ ಮತ್ತೊಂದನ್ನು ಇಟ್ಟು ನೋಡುವ ಗುಣ ನೈಜವಾದುದು ಮತ್ತು ಅದನ್ನು ಪ್ರಕಾಶ ಪಡುವಂತೆ ಮಾಡುವ ಸಹಜ ಕಲೆ ಕುವೆಂಪು ಅವರಿಗೆ ಸಿದ್ಧಿಸಿದೆ. ಕಾದಂಬರಿಯಲ್ಲಿ ಜರುಗುವ ವರ್ಣ ವರ್ಗ ಸಂಘರ್ಷಗಳು. ಯಾಜಮಾನ್ಯ ಶ್ರಮಿಕ ಸಂಸ್ಕೃತಿಗಳ ಸಂಘರ್ಷ, ಒಡೆತನ–ಜೀತದ ಸಂಘರ್ಷ, ಶ್ರೀಮಂತರು–ಕೂಲಿಕಾರರ ನಡುವಣ ಸಂಘರ್ಷ, ಕಂದಾಚಾರದ ವಿರುದ್ಧ ವಿಚಾರವಾದದ ಸಂಘರ್ಷವಿದೆ.

ಕಾದಂಬರಿಗಳ ಒಡಲಲ್ಲಿ ಆಧುನೀಕರಣ ಪ್ರಕ್ರಿಯೆ ತನ್ನ ಪ್ರಭಾವ ಬೀರಲು ಯತ್ನಿಸಿರುವುದನ್ನು ಹೂವಯ್ಯನ ಚಟುವಟಿಕೆಗಳಲ್ಲಿ, ಬೀಸೆಕಲ್ಲಿನ ಪ್ರಸಂಗದಲ್ಲಿ ಮತಾಂತರ ನಿಗ್ರಹ ಸಂದರ್ಭದಲ್ಲಿ ಗುರುತಿಸಬಹುದಾಗಿದೆ. ಹಾಗೆಯೇ ಆಧ್ಯಾತ್ಮ ವಿವರಗಳು ಅತಿಮಾನುಷ ಘಟನೆಗಳು ಅಸಂಗತವೆನಿಸಿದರೂ ಸಮಗ್ರ ಜೀವನದ ಭಾಗಗಳಾಗಿ ವಿಶ್ವ ಸಂಗತಿಗಳನ್ನು ಬೆಸೆಯುವಂತೆ ಮಾಡಿರುವುದನ್ನು ಕಾದಂಬರಿಗಳಲ್ಲಿ ನೋಡಬಹುದು.

ಕುವೆಂಪು ಅವರ ಕಾದಂಬರಿಗಳು ಕೇವಲ ಇದಮಿತ್ಥಂ ಕೃತಿಗಳಲ್ಲ. ಆಯಾ ಪ್ರಕಾರಕ್ಕೆ ತಕ್ಕ ಭಾಷೆಯನ್ನು ದುಡಿಸಿಕೊಳ್ಳುವಲ್ಲಿ ಕುವೆಂಪು ನಿಷ್ಣಾತರು. ಮಲೆನಾಡಿನ ಭಾಷಾ ಸೊಗಡು ಕಾದಂಬರಿಗಳಲ್ಲಿ ತುಂಬಿ ತುಳುಕಿದೆ. ಅದರಲ್ಲೂ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಪ್ರಯೋಗಗೊಂಡಿರುವ ಭಾಷೆ ಅತ್ಯಂತ ಜೀವಂತಿಕೆಯಿಂದ ಪುಟಿಯುವ ಆಡುನುಡಿಯ ಪ್ರತೀಕವಾಗಿದೆ ; ಸಹಜವಾಗಿ ಅಭಿವ್ಯಕ್ತಗೊಂಡಿದೆ. ಒಂದು ಕೃತಿಯ ಶ್ರೇಷ್ಠತೆ ಭಾಷೆ ಬಳಕೆಯ ಔಚಿತ್ಯಕ್ಕೆ ಅನುಗುಣವಾಗಿರುತ್ತದೆ ಎಂಬ ಮಾತಿಗೆ ಕುವೆಂಪು ಅವರ ಕಾದಂಬರಿಗಳೇ ನಿದರ್ಶನ. ಹಾಗಾದರೆ ಈ ಕಾದಂಬರಿಗಳನ್ನು ಪ್ರಾದೇಶಿಕ ವರ್ಗಕ್ಕೆ ಸೇರಿಸಬಹುದೆ ? ಎಂಬ ಪ್ರಶ್ನೆಯೂ ಇದೆ. ಕಾದಂಬರಿಗಳ ಅಭಿವ್ಯಕ್ತಿ ಪ್ರಾದೇಶಿಕವಾದುದು ನಿಜ. ಆದರೆ ಅವುಗಳ ವಸ್ತು ಸಾರ್ವತ್ರಿಕವಾದದ್ದು. ಹಿನ್ನೆಲೆ ಮಲೆನಾಡಿನದಾದರೂ ನೆಲೆ ವಿಶ್ವಜೀವನವನ್ನು ತೆಕ್ಕೈಸಿಕೊಂಡಿರುವಂಥದು. ಆದುದರಿಂದ ಈ ಕಾದಂಬರಿಗಳನ್ನು ಯಾವುದೇ ಸೀಮಿತ ಚೌಕಟ್ಟಿನ ಒಳಗಿಟ್ಟು ವಿಶ್ಲೇಷಿಸುವುದು ತರವಲ್ಲ. ಏಕೆಂದರೆ ಕುವೆಂಪು ಅವರ ಬರವಣಿಗೆ ಯಾವುದೇ ಪ್ರಕಾರದ್ದಾದರೂ ಸರಿ. ಅದರಲ್ಲಿ ವಿಶ್ವಪ್ರಜ್ಞೆ ಎರಕಗೊಂಡಿರುತ್ತದೆ.

ಕುವೆಂಪು ಕಾದಂಬರಿಗಳು ಪ್ರಾದೇಶಿಕ ಭಾಷಾ ದೃಷ್ಟಿಯಿಂದ ವಿಶಿಷ್ಟವಾಗಿವೆ. ಆದರೆ ಇಡೀ ಕಾದಂಬರಿಗಳನ್ನು ಭಾಷಾ ದೃಷ್ಟಿಯಿಂದ ಪ್ರಾದೇಶಿಕವಾದವು ಎನ್ನಬಹುದೆ ? ಪ್ರಪಂಚದ ಭಾಷಾ ಅಧ್ಯಯನ ಮಾಡಿದರೆ ಪ್ರಾದೇಶಿಕ ವಿಂಗಡಣೆ ತಪ್ಪು. ಕವಿ ಲೇಖಕ ತಾನು ಚಿಕ್ಕಂದಿನಿಂದ ಕಂಡ ಬದುಕು ಸುತ್ತಮುತ್ತಲಿನವರ ಒಡನಾಟದ ಅನುಭವದಿಂದ ಕಾದಂಬರಿ ಬರೆಯುವುದು. ತಾವು ಕಂಡ ಬದುಕಿನ ಪರಿಸರದ ಚಿತ್ರಣದ ಹಿನ್ನೆಲೆ ಆ ದೃಷ್ಟಿಯಿಂದ ಪ್ರತಿಯೊಂದು ಕಾದಂಬರಿ ಪ್ರಾದೇಶಿಕವೆನಿಸುತ್ತದೆ.

'ಕಾನೂರು ಹೆಗ್ಗಡಿತಿ' ವಾಸ್ತವ ಮಾರ್ಗದಲ್ಲಿ ಬಹುಮುಖ್ಯವಾಗಿ ಬಂದ ಪ್ರಾದೇಶಿಕ ಕಾದಂಬರಿ – ಕಥನ ಕಳೆಕಟ್ಟಲು ಭಾಷೆ ಉಪಭಾಷೆಗಳನ್ನು ಬಳಸಿಕೊಂಡು ಕಾದಂಬರಿಯ ಭಾಷಾ ಶರೀರ

ನಿರ್ಮಿತವಾಗಿದೆ. ಈ ಮಾತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಸಂದರ್ಭಕ್ಕೂ ನಿಜ. ಈ ಎರಡೂ ಕಾದಂಬರಿಗಳು ಕನ್ನಡದ ಶ್ರೇಷ್ಠ ಕಾದಂಬರಿಗಳ ಸಾಲಿಗೆ ಈಗಾಗಲೇ ಸೇರಿವೆ. ಇವುಗಳಲ್ಲಿನ ಪ್ರಾದೇಶಿಕತೆಯ ಸತ್ವ, ಪಾತ್ರರಚನೆಯ ವೈವಿಧ್ಯ ಅದ್ಭುತವಾದ ವಾಸ್ತವತೆ ಮತ್ತು ನಿಸರ್ಗ ವರ್ಣನೆಗಳಲ್ಲಿ ಕಂಡುಬರುವ ಕಥನದ ಗುಣವನ್ನು ವಿಮರ್ಶಕರು ಈಗಾಗಲೇ ಗುರುತಿಸಿದ್ದಾರೆ. ಹೆಗ್ಗಡಿತಿಯ ಹೂವಯ್ಯನ ಪಾತ್ರ ಸೃಷ್ಟಿ ನವೋದಯ ಕಾಲದ ಪರಿವರ್ತನೆಯ ಚೈತನ್ಯದ ಪ್ರತೀಕ. ಆತ ಮನುಷ್ಯ ಮನುಷ್ಯರ ಸಂಬಂಧಗಳು ಪವಿತ್ರವಾಗಬೇಕೆಂದು ಆಶಿಸುತ್ತಾನೆ. ಎರಡೂ ಕಾದಂಬರಿಗಳಲ್ಲಿಯ ನಿಸರ್ಗದ ವರ್ಣನೆ ಸ್ವತಂತ್ರವಾದ ಶಕ್ತಿಯಿಂದ ಕೂಡಿದೆ. ಮನುಷ್ಯ ಮತ್ತು ಪ್ರಕೃತಿಯ ಸಂಬಂಧ ಹೊಸ ಸಂಸ್ಕೃತಿಯನ್ನು ಸೃಷ್ಟಿಸುವಲ್ಲಿ ಪ್ರವೃತ್ತವಾಗಿದೆ. ಹೂವಯ್ಯ ವಿದ್ಯಾವಂತ ಸುಶಿಕ್ಷಿತ ಹಾಗೂ ಸಂವೇದನಾಶೀಲ ವ್ಯಕ್ತಿ. ಈ ಪಾತ್ರದ ವ್ಯಕ್ತಿತ್ವಕ್ಕೆ ಒಂದು ಸ್ವತಂತ್ರವಾದ ಅನನ್ಯತೆ ಇದೆ. ಆದರೆ ಮಲೆಗಳಲ್ಲಿ ಮದುಮಗಳು ಕಾದಂಬರಿಯ ಮುಕುಂದಯ್ಯನಿಗೆ ಹೂವಯ್ಯನಲ್ಲಿರುವ ಸಂಕಲ್ಪ ಶಕ್ತಿಯಿಲ್ಲ. ಹೂವಯ್ಯನದು ಒಂದು ರೀತಿಯಲ್ಲಿ ತಾತ್ವಿಕ ನಿಲುವಿನ ಸ್ವಭಾವ. ಆದರೆ ಮುಕುಂದಯ್ಯನದು ತನ್ನ ಅನುಭವಗಳನ್ನು ಇತರರೊಡನೆ ಹಂಚಿಕೊಳ್ಳುವ ಸ್ವಭಾವ. ಪರಿಸರದ ಪುನರ್‌ಸೃಷ್ಟಿಯಲ್ಲಿ ಕುವೆಂಪು ಹೆಗ್ಗಡಿತಿಯಲ್ಲೂ ಸಾಧಿಸಿರುವ ಸಾಧನೆ ದೊಡ್ಡದು. ಮಲೆನಾಡಿನ ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ವಿವರಗಳನ್ನು ಐತಿಹಾಸಿಕ ದೃಷ್ಟಿಯಿಂದ ಗ್ರಹಿಸಿರುವ ಕುವೆಂಪು ಅವರ ಸಂವೇದನೆ ಅಭೂತಪೂರ್ವವಾದುದು.

ಕುವೆಂಪು ಭಾಷೆ ಸಂಸ್ಕೃತ ಭೂಯಿಷ್ಠವಾಗಿದೆ ಎಂಬ ನಿರಾಳವಾದ ಆಕ್ಷೇಪಣೆಯೊಂದು ಪ್ರಚಲಿತವಾಗಿರುವುದರಿಂದ ಹಿಂದೆ ಕುವೆಂಪು ಅವರ ಕೃತಿಗಳು ವಿವಿಧ ಸ್ತರಗಳಲ್ಲಿ ಆವಿಷ್ಕಾರಗೊಂಡಿರುವ ಭಾಷೆಯ ಸ್ವರೂಪ ಮತ್ತು ಲಯಗಳನ್ನು ಕುರಿತು ಆಳವಾದ ಪರಿಶೀಲನೆ ಹಾಗೂ ತಿಳುವಳಿಕೆಯ ಅಭಾವವಿದೆ ಮತ್ತು ಕುವೆಂಪು ಅವರ ಕಾವ್ಯಭಾಷೆ ಸಂಸ್ಕೃತದ ಓಜಸ್ಸಿನಿಂದ ಯಾಕೆ ಹಾಗೆ ಪೌರುಷಯುಕ್ತವಾಗಿದೆ ಎನ್ನುವುದರ ಹಿಂದಿರುವ ಸಾಂಸ್ಕೃತಿಕ ಕಾರಣಗಳನ್ನು ಸರಿಯಾಗಿ ಗುರುತಿಸದೇ ಇರುವುದರಿಂದ ಈ ಕುರಿತು ವಿಲಕ್ಷಣವಾದ ಪ್ರತಿಕ್ರಿಯೆಗಳು ಅಭಿವ್ಯಕ್ತವಾಗಿದೆ. ಅವರ ಎರಡು ಕಾದಂಬರಿಗಳಲ್ಲಿ ನಿರೂಪಕನ ಭಾಷೆ ಮಾರ್ಗದ ಸ್ಪರ್ಶದಿಂದ ಕೂಡಿದ್ದರೆ ಅದೇ ಕಾದಂಬರಿಗಳಲ್ಲಿ ವಿವಿಧ ಸಾಮಾಜಿಕ ಸ್ತರಗಳಿಗೆ ಸೇರಿದ ಬಹುಸಂಖ್ಯೆಯ ಪಾತ್ರಗಳು ತಮ್ಮ ಸ್ವಭಾವಾನುಸಾರಿಯಾಗಿ ಮಾತನಾಡುವ ಭಾಷೆಯ ಪ್ರಾದೇಶಿಕ ಚಹರೆಗಳ ದೇಸಿಯನ್ನು ಗಮನಿಸಿದರೆ ಕುವೆಂಪು ಅವರ ಭಾಷೆಯ ವೈವಿಧ್ಯ ಮತ್ತು ವಿಸ್ತಾರಗಳು ಯಾರನ್ನಾದರೂ ಚಕಿತಗೊಳಿಸುತ್ತವೆ. ಕುವೆಂಪು ಅವರ ಶೈಲಿಯೊಳಗೆ ಕಂಡುಬರುವ ಭಾಷಾ ಪ್ರಯೋಗ ಕನ್ನಡ ಸಾಹಿತ್ಯ ಪರಂಪರೆಗೆ ಅಪರಿಚಿತವಾದುದೇನಲ್ಲ ಮತ್ತು ಅದು ಈ ಪರಂಪರೆಯ ಆಳವಾದ ಅರಿವಿನಿಂದ ನಿಷ್ಪನ್ನವಾದುದು. ಯಾವ ಸಂದರ್ಭಗಳಲ್ಲಿ ಸಂಸ್ಕೃತ ಬಳಸುತ್ತಾರೆ, ವೈದಿಕ ವಿಷಯ ತತ್ವ, ಸಿದ್ಧಾಂತ ಮೊದಲಾದವು ಬಂದಾಗ ಮನೋವಿಜ್ಞಾನ, ಅತಿಮಾನುಷ ವಿಷಯಗಳ ಆಧ್ಯಾತ್ಮಿಕ ವಿಷಯಗಳನ್ನು ತಿಳಿಸುವಾಗ ಸಂಸ್ಕೃತವನ್ನು ಅಚ್ಚನಿಸರ್ಗ ವರ್ಣನೆಯಲ್ಲಿ ಬದುಕಿನ ವಿವಿಧ ಸ್ತರಗಳನ್ನು ಚಿತ್ರಿಸುವಾಗ ಅಚ್ಚಗನ್ನಡ/ ಸಂಸ್ಕೃತ ಬಳಸುತ್ತಾರೆ. ಪ್ರಾಚೀನ ಉಪನಿಷತ್ ಕಾಲದ ಪಾಶ್ಚಾತ್ಯರ ಚಿಂತನೆಗಳನ್ನು ಆಲೋಚಿಸಿ ಬದುಕನ್ನು ಆ ಮೂಲಕ ನೋಡುವ ಸಂದರ್ಭಗಳಲ್ಲಿ ಅನ್ಯ ಭಾಷೆಯನ್ನು ಬಳಸಿದರೆ ಉಳಿದಂತೆ

ಇವರಷ್ಟು ಅಚ್ಚಗನ್ನಡ ಬಳಸುವವರು ಮತ್ತೊಬ್ಬರಿಲ್ಲ ಎನ್ನಬಹುದು. ಕುವೆಂಪುರವರಲ್ಲಿ ಆದರ್ಶೀಕರಣವಿದೆ ಬೇಕೆಂದ ಪಾತ್ರಗಳನ್ನು ಕೃತಕವಾಗಿ ಆದರ್ಶೀಕರಣ ಮಾಡುವುದಿಲ್ಲ. ಹೂವಯ್ಯನ ಆದರ್ಶ ಇವರಿಗೆ ಸರಳವಾಗಿ ಕಂಡರೂ ಬೇರೆಯವರಿಗೆ ಭಿನ್ನ ರೀತಿಯಾಗಿರುತ್ತದೆ.

ಮಲೆನಾಡಿನ ಭಾಷಾ ಸೊಗಡು ಕಾದಂಬರಿಗಳಲ್ಲಿ ಎರಕವಾಗಿದೆ. ಭಾಷೆ ಜೀವಂತಿಕೆಯಿಂದ ತುಂಬಿದೆ. ಇವರ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಸಮಾಜ ಚಿತ್ರಣ ನಿಸರ್ಗ ಚಿತ್ರಣವನ್ನು ಬಯಲುಸೀಮೆಯ ಜನರು ಮಲೆನಾಡಿನ ಭಾಷೆ ಮತ್ತು ಸಮಾಜವನ್ನು ಈ ಕಾದಂಬರಿಗಳಲ್ಲಿ ಓದಿ ಗ್ರಹಿಸಿದರೆ ವರ್ಣಾನಾತೀತ ಮಲೆನಾಡು ಕಣ್ಣುಮುಂದೆ ಬಂದು ನಿಲ್ಲುತ್ತದೆ.

ಕವಿ ನಿಸರ್ಗದ ಶಿಶು ಅವನು ಹುಟ್ಟಿ ಬಂದ ಪರಿಸರ ಅವನ ಬದುಕನ್ನು ಜೀವಿತದ ಕೊನೆಯ ತನಕ ಬಾಚಿ ತಬ್ಬಿರುತ್ತದೆ. ಅಲ್ಲಿನ ಆಚಾರ–ವಿಚಾರ ಜೀವನ ರೀತಿ ನೀತಿ ಸಾಮಾಜಿಕ ಸಮಸ್ಯೆ ಅವನ ಪ್ರಜ್ಞಾವಲಯವನ್ನು ಆವರಿಸಿರುತ್ತವೆ. ಹಸಿವು, ಬಡತನ, ಶೋಷಣೆ, ಧಾರ್ಮಿಕ ನಂಬಿಕೆ ಮುಂತಾದವುಗಳನ್ನು ತೆರೆದ ಮನಸ್ಸಿನಿಂದ ಗಮನಿಸುತ್ತಾರೆ. ಕುವೆಂಪು ಒಕ್ಕಲಿಗರು, ದಲಿತರನ್ನು, ಶೂದ್ರರನ್ನು ಹೇಗೆ ಶೋಷಣೆ ಮಾಡುತ್ತಾರೆ ಎನ್ನುವುದನ್ನು ಚಿಂತಿಸಿದ್ದಾರೆ. ಆಗ ಅವರು ಕೆಳವರ್ಗದವರಾಗಿ ಚಿಂತಿಸುತ್ತಾರೆ. ಕುವೆಂಪು ಜಾತಿ ಮತಗಳನ್ನು ಮೀರಿದವರು.

ನಿಜವಾದ ನವ್ಯತೆ ಪರಂಪರಾಗತ ಮೌಲ್ಯಗಳಿಂದ ವಿಭೇದನಗೊಳ್ಳಬೇಕಾಗಿಲ್ಲ. ಬದುಕಿನ ಯಾವುದೋ ಒಂದು ಮುಖಕ್ಕೆ ಸೀಮಿತವಾಗಿ ದುಶ್ಚಟಗಳಿಂದ ವಿಕೃತವಾಗಬೇಕಾಗಿಲ್ಲ; ಅದು ಸರ್ವಾಗ್ರಾಹಿ ಇಂಥ ನಿಜವಾದ ನವ್ಯತೆಯನ್ನು ಕಾಣುತ್ತೇವೆ. ಕುವೆಂಪು ಅವರ ಭಾವದಲ್ಲಾಗಲಿ, ಭಾಷೆಯಲ್ಲಾಗಲಿ ಕುವೆಂಪು ಸಂಪ್ರದಾಯ ಶರಣರಲ್ಲ. ಅವರು ಕಾಲ ಧರ್ಮದೊಡನೆ ಹೆಜ್ಜೆಹಾಕುವ ಕವಿ ಸತತವಾಗಿ ಬೆಳೆಯುತ್ತ ಬಂದಿರುವವರು.

**********

# ಅನುಬಂಧಗಳು

## 1. ಕುವೆಂಪು ಕಾದಂಬರಿಗಳಲ್ಲಿನ ಸ್ಥಳ ನಾಮಗಳು:

### *1. ಕಾನೂರು ಸುಬ್ಬಮ್ಮ ಹೆಗ್ಗಡಿತಿ :*

ಕಾನೂರು, ಕೆಳಕಾನೂರು, ಕಾನುಬೈಲ, ಕೊಪ್ಪ, ಮುತ್ತಳ್ಳಿ, ಸೀತೆಮನೆ, ನೆಲ್ಲುಹಳ್ಳಿ, ತೀರ್ಥಹಳ್ಳಿ, ಬಾಳೂರು, ಮೇಗರಳ್ಳಿ, ಮೈಸೂರು, ಉಂಟೂರು, ಮದ್ದೂರು, ಬೈಂದೂರು, ಅಗ್ರಹಾರ, ದಕ್ಷಿಣಕನ್ನಡ, ಚಿಕ್ಕಮಗಳೂರು, ಅತ್ತಿಗದ್ದೆ, ನುಗ್ಗಿಮನೆ, ಹುಂಚದ ಕಟ್ಟೆ, ಸಿಬ್ಬಲುಗುಡ್ಡ, ಸೋಮೇಶ್ವರ, ಸಂಪಿಗೆ ಹಳ್ಳ, ಸಿದ್ಧರಮಠ, ಮೇಳಿಗೆ, ಕೂಳೂರು, ಆಗುಂಬೆ, ಕುರುವಳ್ಳಿ, ಕುಕ್ಕನಹಳ್ಳಿ, ಕಾಶಿ, ರಾಮೇಶ್ವರ, ತಿರುಪತಿ, ಧರ್ಮಸ್ಥಳ.

### *2. ಮಲೆಗಳಲ್ಲಿ ಮದುಮಗಳು :*

ಸಿಂಬಾವಿ, ಲಕ್ಕುಂದ, ಸೀತೂರು, ಮೇಗರಹಳ್ಳಿ, ತೀರ್ಥಹಳ್ಳಿ, ಆಗುಂಬೆ, ಕಲ್ಲೂರು, ಹೂವಳ್ಳಿ, ಕೋಣೂರು ಹಳೆಮನೆ, ಬೆಟ್ಟಳ್ಳಿ, ಹುಲಿಕಲ್ಲುಗುಡ್ಡ, ಬಾವಿಕೊಪ್ಪ, ಧರ್ಮಸ್ಥಳ, ತಿರುಪತಿ, ಮೂಗೂರು, ದುರ್ಗ, ಕೊಪ್ಪ, ಕಾಗಿನಹಳ್ಳಿ, ಹೊಸಕೇರಿ, ಅತ್ತಿಗದ್ದೆ, ತೂದೂರು, ದೇವಂಗಿ, ಬೀರೂರು, ಮತ್ತಿಗೇರಿ, ಮಾಳೂರು, ಮುಂಡಕಾರು, ಮುತ್ತೂರು, ಶೃಂಗೇರಿ, ಸಿಂಧುವಳ್ಳಿ ಸಿದ್ಧರಮಠ, ಹೊನ್ನಳ್ಳಿ, ಕಾನೂರು ಸೀತೆಮನೆ.

# ಅನುಬಂಧ–2

## 2 ಕುವೆಂಪು ಜೀವನ ಸಾಧನೆ

1904 ಜನನ : 29–12–1904 – ಹಿರೇಕೊಡಿಗೆಯಲ್ಲಿ ತಾಯಿ : ಸೀತಮ್ಮ (ಹಿರೇಕೊಡಿಗೆ, ಕೊಪ್ಪ ತಾ।।, ಚಿಕ್ಕಮಗಳೂರು ಜಿಲ್ಲೆ) ತಂದೆ : ವೆಂಕಟಯ್ಯಗೌಡರು, ಕುಪ್ಪಳಿ, ತೀರ್ಥಹಳ್ಳಿ ತಾ।।, ಶಿವಮೊಗ್ಗ ಜಿಲ್ಲೆ. ಮೇಲಿನ ಇಬ್ಬರ ಮದುವೆ : 31–05–1901.

ಹಿರೇಕೊಡಿಗೆ–ಕುಪ್ಪಳಿ ಕುಟುಂಬಗಳೆರಡೂ ಸಾಕಷ್ಟು ಶ್ರೀಮಂತ ಕುಟುಂಬಗಳಾಗಿದ್ದು ಸು.1901ರ ಅನಂತರ ಕ್ರಮೇಣ ಅವುಗಳ ಶ್ರೀಮಂತಿಕೆ ಇಳಿಮುಖವಾಯಿತ್ತೆಂದು ತೋರುತ್ತದೆ.

1916 ರತನಕ ಕುಪ್ಪಳಿಯಲ್ಲಿ ಮನೆಯಲ್ಲೇ ಖಾಸಗಿ ಮೇಷ್ಟರ ಮೂಲಕ ಪ್ರಾರಂಭಿಕ ವಿದ್ಯಾಭ್ಯಾಸ. ಇಬ್ಬರು ಸೋದರಿಯರು (ದಾನಮ್ಮ–ಪುಟ್ಟಮ್ಮ) ಹುಟ್ಟಿದ್ದು.

1916ರಲ್ಲಿ ತಂದೆಯ ಮರಣ.

1916 ರಿಂದ 1920 ತೀರ್ಥಹಳ್ಳಿಯಲ್ಲಿ ಮಾಧ್ಯಮಿಕ ವಿದ್ಯಾಭ್ಯಾಸ ; 1919 ರಲ್ಲಿ ಕನ್ನಡ ಲೋಅರ್ ಸೆಕೆಂಡರಿಯಲ್ಲಿ, 1920ರಲ್ಲಿ ಇಂಗ್ಲಿಷ್ ಲೋಅರ್ ಸೆಕೆಂಡರಿಯಲ್ಲಿ ಉತ್ತೀರ್ಣರಾದ್ದು.

1920 ರಿಂದ 1927 ಮೈಸೂರಿನಲ್ಲಿ ವಿದ್ಯಾಭ್ಯಾಸ : ವೆಸ್ಲಿಯನ್ ಮಿಷನ್ ಹೈಸ್ಕೂಲು ಮತ್ತು ಮಹಾರಾಜಾ ಕಾಲೇಜುಗಳಲ್ಲಿ: 1927 ರಲ್ಲಿ ಬಿ.ಎ.ಪದವಿ ಪಡೆದದ್ದು.

ಈ ಮಧ್ಯೆ – 1924ರಲ್ಲಿ ತಾಯಿಯ ಮರಣ ; ಮುಂದೆ ಕೆಲವು ವರ್ಷಗಳಲ್ಲಿ ಮದುವೆಯಾಗಿದ್ದ ಸೋದರಿಯರಿಬ್ಬರೂ ಅರೆವಯಸ್ಸಿನಲ್ಲಿ ತೀರಿಕೊಂಡದ್ದು.

1926 ರಲ್ಲಿ ಹೋಟೆಲು ಬಿಟ್ಟು ಸ್ವಾಮಿ ಸಿದ್ಧೇಶ್ವರಾನಂದರ ಪ್ರೋತ್ಸಾಹದಿಂದ ರಾಮಕೃಷ್ಣಾಶ್ರಮಕ್ಕೆ ಹೋಗಿ ಸೇರಿಕೊಂಡದ್ದು ; ಅದೇ ವರ್ಷ ಮೈಲಿಬೇನೆಯನ್ನನುಭವಿಸಿದ್ದು ; ಅನಂತರ, ಕೆಲವು ದಿನ ಮನೋವಿಲಕ್ಷಣತೆಯುಂಟಾಗಿ ಆ ಕಾಲದಲ್ಲಿ ತಾನು ಪುಟ್ಟಪ್ಪನಲ್ಲ, ವಿವೇಕಾನಂದ ಅಂತ ಸಾರಿಕೊಂಡದ್ದು.

ಆರಂಭದ ಬರವಣಿಗೆಗಳು ಪ್ರಕಟವಾದ್ದು : ಮೊದಲ ಇಂಗ್ಲಿಷ್ ಕವಿತಾ ಸಂಕಲನ ಬಿಗಿನರ್ಸ್ ಮ್ಯೂಸ್ (1922) ಮತ್ತು ಕೆಲವು ಕನ್ನಡ ಬರವಣಿಗೆಗಳು.

1928 ಬೆಂಗಳೂರಲ್ಲಿ ನಡೆದ ವಿದ್ಯಾರ್ಥಿ ಕವಿಸಮ್ಮೇಳನದ ಅಧ್ಯಕ್ಷರಾದದ್ದು.

1929 ಕಲ್ಕತ್ತಾ ಯಾತ್ರೆ ; ಬೇಲೂರು ರಾಮಕೃಷ್ಣಮಠದಲ್ಲಿ ಸ್ವಾಮಿ ಶಿವಾನಂದರಿಂದ ದೀಕ್ಷೆ ಪಡೆದದ್ದು. (08–10–1929) ಎಂ.ಎ.ನಲ್ಲಿ ಉತ್ತೀರ್ಣರಾದ್ದು; ಮೈಸೂರು ವಿಶ್ವವಿದ್ಯಾಲಯದ ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇರಿಕೊಂಡದ್ದು.

1930 ಮೊತ್ತಮೊದಲನೆಯ ಕವನ ಸಂಕಲನ – 'ಕೊಳಲು' ಪ್ರಕಟಣೆ.

1933 ಹುಬ್ಬಳ್ಳಿಯಲ್ಲಿ ನಡೆದ 19ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ಕವಿಗೋಷ್ಠಿ' ಯ ಅಧ್ಯಕ್ಷರಾದದ್ದು.

1936 'ಕಾನೂರು ಹೆಗ್ಗಡಿತಿ' ಪ್ರಕಟಣೆ ; ಮಹಾಛಂದಸ್ಸು ಮಹೋಪಮೆಗಳ ಪ್ರಯೋಗವಿರುವ 'ಚಿತ್ರಾಂಗದಾ' ಖಂಡಕಾವ್ಯದ ಪ್ರಕಟಣೆ.

1937 ಶ್ರೀಮತಿ ಹೇಮಾವತಿ ಅವರೊಡನೆ ಮದುವೆ ; ಹೊಸದಾಗಿ ಕಟ್ಟಿಸಿಕೊಂಡ ಸ್ವಂತ ಮನೆ 'ಉದಯರವಿ' (ಒಂಟಿಕೊಪ್ಪಲು, ಮೈಸೂರು)ಗೆ ಹೋಗಿ ನೆಲೆಸಿದ್ದು.

1938 ಮೊದಲನೆಯ ಮಗ ಪೂರ್ಣಚಂದ್ರ ತೇಜಸ್ವಿ ಹುಟ್ಟಿದ್ದು (08–09–1938)

1939 ಕನ್ನಡ ರೀಡರ್ ಆಗಿ ಸೆಂಟ್ರಲ್ ಕಾಲೇಜಿನಲ್ಲಿ ನೇಮಕ ; ಬೆಂಗಳೂರಿಗೆ ಹೋಗಿ ನೆಲೆಸಿದ್ದು. ಗುರು ವೆಂಕಣ್ಣಯ್ಯನವರ ನಿಧನ.

1941 ಎರಡನೆಯ ಮಗ ಕೋಕಿಲೋದಯ ಚೈತ್ರ ಹುಟ್ಟಿದ್ದು(02–05–1941)

1943 ಮೊದಲನೆಯ ಮಗಳು ಇಂದುಕಲಾ ಹುಟ್ಟಿದ್ದು(21–07–1943)

1945 ಎರಡನೆಯ ಮಗಳು ತಾರಿಣಿ ಹುಟ್ಟಿದ್ದು(06–02–1945)

1946 ಕನ್ನಡ ಪ್ರಾಧ್ಯಾಪಕರು ಮತ್ತು ಕನ್ನಡ ವಿಭಾಗ ಮುಖ್ಯಸ್ಥರಾಗಿ ಮಹಾರಾಜಾ ಕಾಲೇಜಿನಲ್ಲಿ ನೇಮಕವಾದ್ದು; ಮೈಸೂರಿಗೆ ವಾಪಾಸಾಗಿ ನೆಲೆಸಿದ್ದು.

1949 ಶ್ರೀ ರಾಮಾಯಣ ದರ್ಶನಂ ಮೊದಲ ಮಹಾಸಂಪುಟದ ಪ್ರಕಟಣೆ.

1951 ಶ್ರೀ ರಾಮಾಯಣ ದರ್ಶನಂ ಎರಡನೇ ಮಹಾಸಂಪುಟ (ಪೂರ್ಣಗ್ರಂಥ) ಪ್ರಕಟಣೆ.

1955 ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರಾದದ್ದು ; 'ರಾಮಾಯಣ ದರ್ಶನಂ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿದೊರಕಿದ್ದು.

1956 ಮೈಸೂರು ವಿಶ್ವವಿದ್ಯಾಲಯದಿಂದ ಗೌರವ ಡಿ.ಲಿಟ್ ಸ್ವೀಕರಿಸಿದ್ದು; ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ ನೇಮಕವಾದದ್ದು.
ಮೈಸೂರಿನಲ್ಲಿ ನಡೆದ 38ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರಾದದ್ದು.

1957 ಧಾರವಾಡದಲ್ಲಿ ನಡೆದ 39ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದದ್ದು.

1958 ರಾಷ್ಟ್ರಪತಿಗಳಿಂದ ಪದ್ಮಭೂಷಣ ಪ್ರಶಸ್ತಿಸ್ವೀಕರಿಸಿದ್ದು.

1960 'ಮಾನಸ ಗಂಗೋತ್ರಿ' (ಮೈಸೂರು ವಿ.ವಿ., ಮೈಸೂರು ಸ್ನಾತಕೋತ್ತರ ಕೇಂದ್ರ) ವಿಸ್ತರಣೆಯ ಸ್ಥಾಪನೆ : ಉಪಕುಲಪತಿ ಹುದ್ದೆಯಿಂದ ನಿವೃತ್ತರಾದ್ದು.

1964 ರಾಜ್ಯ ಸರ್ಕಾರದಿಂದ 'ರಾಷ್ಟ್ರಕವಿ' ಪ್ರಶಸ್ತಿಯನ್ನು ಸ್ವೀಕರಿಸಿದ್ದು.

1966 ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಿ.ಲಿಟ್ ಸ್ವೀಕರಿಸಿದ್ದು.

1967 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಪ್ರಕಟಣೆ.

1968 'ರಾಮಾಯಣ ದರ್ಶನಂ'' ಕೃತಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿದ್ದು
(ಕನ್ನಡದ ಮೊದಲ ಜ್ಞಾನಪೀಠ ಪ್ರಶಸ್ತಿ).

1969 ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಗೌರವ ಡಿ.ಲಿಟ್ ಪ್ರಶಸ್ತಿ ಸ್ವೀಕರಿಸಿದ್ದು.

1974 ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಘಟಿಕೋತ್ಸವ ಭಾಷಣ ಮಾಡಿದ್ದು.

1979 ಕನ್ನಡ ಭಾಷೆ–ಸಾಹಿತ್ಯಗಳಿಗೆ ಸಲ್ಲಿಸಿದ ಸೇವೆಗಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಸ್ವೀಕರಿಸಿದ್ದು.

1982 ಪತ್ನಿ ಶ್ರೀಮತಿ ಹೇಮಾವತಿ ಅವರ ನಿಧನ.

1985 ಮೊದಲನೇ 'ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನ' (ಮೈಸೂರು)ಉದ್ಘಾಟಿಸಿದ್ದು.

1994 ನಿಧನ : 10–11–1994

# ಅನುಬಂಧ–3

## : ಆಧಾರ ಗ್ರಂಥಗಳು :

1) ಕಾನೂರು ಸುಬ್ಬಮ್ಮ ಹೆಗ್ಗಡಿತಿ
ಲೇಖಕರು : ಕುವೆಂಪು
ಪ್ರಕಟಣೆ : ಉದಯರವಿ ಪ್ರಕಾಶನ, ಮೈಸೂರು.
ವರ್ಷ : 1970

2) ಮಲೆಗಳಲ್ಲಿ ಮದುಮಗಳು
ಲೇಖಕರು : ಕುವೆಂಪು
ಪ್ರಕಟಣೆ : ಉದಯರವಿ ಪ್ರಕಾಶನ, ಮೈಸೂರು.
ವರ್ಷ : 1998

3) ಸಹ್ಯಾದ್ರಿ , ಕುವೆಂಪು ಅಭಿನಂದನಾ ಗ್ರಂಥ
ಲೇಖಕರು : ದೇ.ಜವರೇಗೌಡ ಇತರರು (ಸಂ)
ಪ್ರಕಟಣೆ : ಶ್ರೀ ಕುವೆಂಪು, ವಿದ್ಯಾವರ್ಧಕ ಟ್ರಸ್ಟ್, ವಾಣಿವಿಲಾಸ ಪುರಂ, ಮೈಸೂರು–12
ವರ್ಷ : 1945

4) ಪ್ರತಿ ಸಂಸ್ಕೃತಿ
ಲೇಖಕರು : ಡಾ॥ ರಹಮತ್ ತರೀಕೆರೆ
ಸಂಪಾದಕರು : ಚಿ॥ ಶ್ರೀನಿವಾಸರಾಜು
ಪ್ರಕಟಣೆ : ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು.
ವರ್ಷ : 1993

5) ಉಡುಗೊರೆ
ಸಂಪಾದಕರು : ಪ.ವಿ.ಚಂದ್ರಶೇಖರ್, ಜ.ಶಿ.ಪರಶಿವಮೂರ್ತಿ
ಪ್ರಕಟಣೆ : ಮಹಾರಾಜ ಕಾಲೇಜು, ಮೈಸೂರು.
ವರ್ಷ : 1956

6) ಉಪಾಯನ ಕೃತಿ ಕರಂಡ
ಸಂಪಾದಕರು : ಕಾಶಿ ವಿಶ್ವನಾಥಶೆಟ್ಟಿ
ಪ್ರಕಟಣೆ : ಶ್ರೀ ಕುವೆಂಪು ಸನ್ಮಾನ ಸಮಿತಿ, ಚಿಕ್ಕಮಗಳೂರು.
ವರ್ಷ : 1969

7) ಕುವೆಂಪು ದರ್ಶನ
ಸಂಪಾದಕರು: ಡಾ॥ ಕೇಶವ ಆರ್.
ಪ್ರಕಾಶಕರು: ವಿಶ್ವವಿದ್ಯಾಲಯ ಸಂಜೆ ಕಾಲೇಜು, ಮೈಸೂರು.
ವರ್ಷ : 2004

8) ಕುವೆಂಪು ಕಥನ
ಲೇಖಕರು : ಡಾ॥ ಉದ್ದಂಡಯ್ಯ
ಪ್ರಕಟಣೆ : ಅಧ್ಯಯನ ಮಂಡಲ, ಬೆಂಗಳೂರು.
ವರ್ಷ : 2004

9) ಸಾಹಿತ್ಯಾರಾಧನೆ
ಸಂಪಾದಕರು : ದೇ.ಜವರೇಗೌಡ, ಸಿ.ಪಿ.ಕೆ.
ಪ್ರಕಟಣೆ : ಮೋಹನ್ ಪ್ರಕಾಶನ, ಜಯನಗರ, ಮೈಸೂರು.

10) ಸಾಹಿತ್ಯ ವಿಮರ್ಶೆ : 1968
ಲೇಖಕರು : ಸಿ.ಪಿ.ಕೆ.

11) ಕುವೆಂಪು : ಅನುಸಂಧಾನ
ಲೇಖಕರು : ಪ್ರೊ. ಸೋಮಶೇಖರಗೌಡ
ಪ್ರಕಟಣೆ : ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

12) ಸಾಹಿತ್ಯ ಮತ್ತು ಚರಿತ್ರೆ
ಲೇಖಕರು : ಚಂದ್ರಶೇಖರ್ ಎಸ್.
ಪ್ರಕಾಶಕರು: ನಮ್ಮ ಪ್ರಕಾಶನ, ತಿಪಟೂರು
ವರ್ಷ : 2003

13) ಆಲಿಸಯ್ಯ ಮಲೆಯ ಕವಿ
ಲೇಖಕರು: ವಿ.ಚಂದ್ರಶೇಖರ ನಂಗಲಿ
ಪ್ರಕಾಶಕರು: ನವಕರ್ನಾಟಕ ಪಬ್ಲಿಕೇಷನ್ಸ್
ಎಂ.ಬಿ.ಸಿ.ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು.
ವರ್ಷ : 2005

14) ಕುವೆಂಪು ಕಾದಂಬರಿ ಎರಡು ಅಧ್ಯಯನಗಳು
ಲೇಖಕರು : ಟಿ.ಪಿ.ಅಶೋಕ್
ಪ್ರಕಾಶಕರು : ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ
ವರ್ಷ : 2004

15) ಕುವೆಂಪು ಸಾಹಿತ್ಯ : ಕೆಲವು ಮುಖಗಳು
ಲೇಖಕರು : ಸಿ.ಪಿ.ಕೆ.

16) ಅಮೃತ ಮತ್ತು ಗರುಡ
ಲೇಖಕರು : ಡಿ.ಆರ್.ನಾಗರಾಜ್
ಪ್ರಕಾಶಕರು : ಕನ್ನಡ ಮತ್ತುಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
ವರ್ಷ : 1990

17) ಕುವೆಂಪು : ವಿಚಾರಧಾರೆಯ ಪ್ರಸ್ತುತತೆ
ಲೇಖಕರು : ಡಾ|| ಕೆ.ಸಿ.ಶಿವಾರೆಡ್ಡಿ, ಡಾ|| ಎಸ್.ವೈ.ಸೋಮಶೇಖರ

18) ಕವಿ ವಿಭೂತಿ ಮತ್ತು ಇತರ ಲೇಖನಗಳು
ಲೇಖಕರು : ದೇ.ಜ.ಗೌ
ಪ್ರಕಟಣೆ : ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾ ಪರಿಷತ್,
ಕಾಳಿದಾಸ, ಮೈಸೂರು.
ವರ್ಷ : 2002

19) ಶ್ರೀ ಕುವೆಂಪು
ಪ್ರಕಟಣೆ : ಬೆಂಗಳೂರು ವಿಶ್ವವಿದ್ಯಾಲಯ

20) ಯುಗಧರ್ಮ ಹಾಗೂ ಸಾಹಿತ್ಯ ದರ್ಶನ
ಲೇಖಕರು : ಕೀರ್ತಿನಾಥ ಕುರ್ತುಕೋಟಿ
ಪ್ರಕಟಣೆ ವರ್ಷ : 1962

21) ಗಂಗೋತ್ರಿ
ಲೇಖಕರು : ದೇ.ಜವರೇಗೌಡ

22) ಕಾವ್ಯ ಭಾಷೆ
ಲೇಖಕರು : ಎಂ.ಎಚ್.ಕೃಷ್ಣಯ್ಯ
ಪ್ರಕಟಣೆ : ಅಂಕಿತ ಪುಸ್ತಕ, 53, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್,
ಗಾಂಧಿಬಜಾರ್ ಮುಖ್ಯರಸ್ತೆ,
ಬಸವನಗುಡಿ, ಬೆಂಗಳೂರು.

24) ಕುವೆಂಪುಗೆ ಪುಟ್ಟಕನ್ನಡಿ
ಲೇಖಕರು : ಕೆ.ವಿ.ಸುಬ್ಬಣ್ಣ
ಪ್ರಕಾಶಕರು : ಟಿ.ಎಸ್.ದಕ್ಷಿಣಮೂರ್ತಿ , ರಿಜಿಸ್ಟ್ರಾರ್
ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.
ವರ್ಷ : 1995

25) ಕುವೆಂಪು ಸಾಹಿತ್ಯ : ಕೆಲವು ಅಧ್ಯಯನಗಳು
ಲೇಖಕರು : ದೇ.ಜವರೇಗೌಡ

27) ಸಾಹಿತ್ಯ ಭಾಷೆ
ಬೆಂ.ವಿ.ವಿ. ಪ್ರಕಟಣೆ
ವರ್ಷ : 1980

28) ಸಾಹಿತ್ಯ ಮತ್ತು ಭಾಷೆ
ಲೇಖಕರು : ಡಾ॥ಶಾಂತಿನಾಥ ದೇಸಾಯಿ
ವರ್ಷ : 1980

29) ಕುವೆಂಪು ಕಾದಂಬರಿಗಳ ಸಾಂಸ್ಕೃತಿಕ ಅಧ್ಯಯನ
ಲೇಖಕರು : ಮರಿಗುದ್ದಿ ಗುರುಪಾದ
ಪ್ರಕಟಣೆ : ಸಹ್ಯಾದ್ರಿ ಪ್ರಕಾಶನ, ಮೈಸೂರು
ವರ್ಷ : 1989

: ಪತ್ರಿಕೆಗಳು :

1) ಪ್ರಬುದ್ಧ ಕರ್ನಾಟಕ
ಸಂಪುಟ : 85, ಸಂಚಿಕೆ : 336–338

2) ಪುರೋಹಿತಶಾಹಿಯಿಂದ ಶೂದ್ರಶಾಹಿಯೆಡೆಗೆ
ಸಂಕ್ರಮಣ : 108, 109

**************

